# ಪರಾಮಾನಸಶಾಸ್ತ್ರ

ಎಸ್. ಕೆ. ರಾಮಚಂದ್ರರಾವ್



ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ-ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ,ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

**ಎಚ್. ನರಸಿಂಹಯ್ಯ**
ಉಪಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

# 1. ಅದ್ಭುತವಾದ ಅನುಭವಗಳು

ಮನುಷ್ಯನ ಜ್ಞಾನ ಬೆಳೆದಂತೆ ಜಗತ್ತಿನಲ್ಲಿ ಅದ್ಭುತ ಎನ್ನುವುದು ಮರೆಯಾಗುತ್ತಿದೆ. ಒಂದು ಕಾಲಕ್ಕೆ ವಿಸ್ಮಯವನ್ನುಂಟು ಮಾಡುತ್ತಿದ್ದ ಪ್ರಸಂಗಗಳು ಈಗ ನಿತ್ಯ ವ್ಯವಹಾರದ ಮಾತಾಗಿವೆ. ಆದರೂ ಸೋಜಿಗದ, ವಿಸ್ಮಯದ ವಿವರಗಳಿಗೇನು ಈಗಲೂ ಕೊರತೆಯಿಲ್ಲ. ನಿದರ್ಶನಕ್ಕೆ ಪ್ರಸಿದ್ಧವಾದ ಒಂದು ಉಲ್ಲೇಖವನ್ನು ನೋಡಿ. ಇಮಾನ್ಯುಎಲ್ ಸ್ವೀಡನ್‌ಬೊರ್ಗ್ (1668-1772) ವಿಶ್ವವಿಖ್ಯಾತನಾದ ದಾರ್ಶನಿಕ. ಸ್ವೀಡನ್ ದೇಶದವನು ; ಬಹುಮುಖವಾದ ಪ್ರತಿಭೆ ಆತನದು. ಕ್ರೈಸ್ತ ಸಮಾಜದಲ್ಲಿ ಪಂಥವೊಂದರ ಪ್ರವರ್ತಕ ; ಅವನ ಅನುಯಾಯಿಗಳು ಇಂದಿಗೂ ಎಲ್ಲೆಲ್ಲಿಯೂ ಇದ್ದಾರೆ.

ಅವನು 1759 ರಲ್ಲಿ ಗ್ಯೊಟ್‌ನ್‌ಬರ್ಗ್ ಎಂಬಲ್ಲಿ ಇದ್ದಾಗ ವಿಚಿತ್ರವಾದೊಂದು ಅನುಭವವಾಯಿತು ಅವನಿಗೆ. ಅಲ್ಲಿಗೆ ಮುನ್ನೂರು ಮೈಲಿಗಳಷ್ಟು ದೂರವಿರುವ ಸ್ಟಾಕ್‌ಹೋಂ ನಗರದಲ್ಲಿ ಒಬ್ಬಾನೊಬ್ಬ ಗೃಹಸ್ಥನ ಮನೆಗೆ ಬೆಂಕಿ ಬಿದ್ದಂತೆ ಅವನಿಗೆ ಅರಿವಾಯಿತು. ಅದೇನು ಅಸ್ಪಷ್ಟವಾದ ಅರಿವಲ್ಲ. ಅದು ಯಾರ ಮನೆ, ಯಾವ ಬೀದಿಯಲ್ಲಿದ್ದ ಮನೆ, ಮನೆಯ ನಂಬರೆಷ್ಟು, ಬೆಂಕಿ ಉರಿಯುತ್ತಿದ್ದುದು ಹೇಗೆ, ಅದರಿಂದ ಒದಗಿದ ನಷ್ಟ ಎಷ್ಟು, ಕಷ್ಟ ಏನು, ಅದನ್ನು ಆರಿಸಿದ್ದು ಹೇಗೆ, ಇಷ್ಟೂ ಅವನ ಕಣ್ಣಿಗೆ ಕಟ್ಟಿದಂತೆ, ಅವನು ಎದುರಿಗೇ ನಿಂತು ನೋಡುತ್ತಿದ್ದಂತೆ ಭಾಸವಾಯಿತು. ಒಡನೆಯೇ ಆತ ತಾನಿದ್ದ ಊರಿನ

ಅಧಿಕಾರಿಗಳಿಗೆ ತಾನು ಕಂಡುದನ್ನು ತಿಳಿಸಿದ. ಮುನ್ನೂರು ಮೈಲಿ ದೂರ ನಡೆದುದೆಂದು ಸ್ವೀಡನ್‌ಬೊರ್ಗ್ ಹೇಳಿದ ಕಥೆಯನ್ನು ಅವರು ನಂಬಲಿಲ್ಲ. ಆದರೆ ನಾಲ್ಕೈದು ದಿನಗಳು ಕಳೆದ ನಂತರ ಸ್ಟಾಕ್‌ಹೋಂ ನಗರದಿಂದ ಅಲ್ಲಿ ಒದಗಿದ ಬೆಂಕಿ ಅನಾಹುತದ ವಿವರಗಳು ಪ್ರಕಟವಾದುವು. ಅವರು ಕೊಟ್ಟ ವಿವರಗಳೂ ಸ್ವೀಡನ್‌ಬೊರ್ಗ್ ಕಂಡ ವಿವರಗಳೂ ತೀರ ಸದೃಶ ವಾಗಿದ್ದುವು.

ಇನ್ನೊಂದು ಪ್ರಸಂಗ. ಹತ್ತು ವರ್ಷದ ಹುಡುಗಿಯೊಬ್ಬಳು ಒಮ್ಮೆ ಯಾವುದೋ ಪುಸ್ತಕವನ್ನೋದುತ್ತ ಬೀದಿಯಲ್ಲಿ ನಡೆದು ಹೋಗುತ್ತಿದ್ದಳು. ಇದ್ದಕ್ಕಿದ್ದಂತೆ ಅವಳಿಗೆ ಸುತ್ತು ಮುತ್ತಲಿನ ವಿವರಗಳೆಲ್ಲ ಮಂಜುಮಂಜಾಗಿ, ತನ್ನ ಮನೆಯ ಒಂದು ಕೋಣೆಯಲ್ಲಿ ತನ್ನ ತಾಯಿ ಸತ್ತುಬಿದ್ದಿದ್ದಂತೆ ಗೋಚರವಾಯಿತು. ಮನೆಯಲ್ಲಿ ಆ ಕೋಣೆಯನ್ನು ಯಾರೂ ಬಳಸುತ್ತಿದ್ದಿಲ್ಲ; ಹುಡುಗಿ ಮನೆಯಿಂದ ಹೊರಡುವಾಗ ಆರೋಗ್ಯವಾಗಿಯೇ ಇದ್ದ ತಾಯಿ ತಾನೂ ಹೊರಗೆ ಹೊರಡಲು ಸಿದ್ಧವಾಗು ತ್ತಿದ್ದಳು. ಆದುದರಿಂದ ಹುಡುಗಿ ತನಗೆ ಗೋಚರವಾದ ಸಂಗತಿ ಯನ್ನು ನಂಬಲಿಲ್ಲ. ಆದರೆ ಅದೇನು ಕೇವಲ ಭಾವನೆಯಂತಿರದೆ, ಕಣ್ಣಿಗೆ ಕಟ್ಟಿದಂತೆ ಸ್ಪಷ್ಟವಾಗಿದ್ದುದರಿಂದ, ಹೇಗೂ ಇರಲಿ ಎಂದುಕೊಂಡು, ಒಬ್ಬ ವೈದ್ಯನ ಮನೆಗೆ ಹೋಗಿ ಅವನನ್ನು ಕರೆದುಕೊಂಡು ತನ್ನ ಮನೆಗೆ ಬಂದಳು. ಅವರು ಬಾಗಿಲ ಬಳಿ ಬರುವುದಕ್ಕೂ ಹುಡುಗಿಯ ತಂದೆ ಮನೆಗೆ ಹಿಂದಿರುಗುವು ದಕ್ಕೂ ಸರಿಯಾಯಿತು. ವೈದ್ಯ ಬಂದುದನ್ನು ಕಂಡು ತಂದೆಗೆ ಆಶ್ಚರ್ಯವಾಗಿ—"ಯಾರಿಗೆ ಏನಾಗಿದೆ?" ಎಂದು ಕೇಳಿದ. ಹುಡುಗಿ ತಾನು ಕಂಡುದನ್ನು ತಿಳಿಸಿದಳು. ಮೂವರೂ ಕೂಡಿ,

ಮನೆಯ ಒಳಗೆ ಹೋಗಿ, ಹುಡುಗಿ ತಿಳಿಸಿದ ಕೋಣೆಗೇ ನೇರವಾಗಿ ಬಂದರು. ಅಲ್ಲಿ ಅವಳ ತಾಯಿ, ಹುಡುಗಿ ಕಂಡಂತೆಯೇ ಪ್ರಜ್ಞೆ ತಪ್ಪಿ ಬಿದ್ದಿದ್ದಳು. ವೈದ್ಯ ಪರೀಕ್ಷಿಸಿ ಹೃದಯಾಘಾತವೆಂದು ತಿಳಿಸಿದನು. ಅಲ್ಲಿಯವರೆಗೆ ಏನೊಂದು ಬೇನೆಯೂ ಇಲ್ಲದೆ ದೃಢಕಾಯಳಾಗಿದ್ದ ಆಕೆಗೆ ಹೀಗೇಕಾಯಿತು ಎಂದು ಯಾರಿಗೂ ಊಹಿಸಲು ಸಾಧ್ಯವಿರಲಿಲ್ಲ. ಅದಲ್ಲದೆ, ಯಾರೂ ಸಾಮಾನ್ಯವಾಗಿ ಬಳಸದ ಕೋಣೆಗೆ ಆಕೆ ಇಂದು ಬಂದುದು ಏಕೆ ಎಂಬುದೂ ಅರ್ಥವಾಗಲಿಲ್ಲ. ಆದರೆ ಬೀದಿಯಲ್ಲಿ ಹುಡುಗಿ ಕಂಡುದು ವಾಸ್ತವವಾಗಿ ನಡೆದ ಸಂಗತಿಯೇ ಆಗಿದ್ದಿತು!

## ನಂಬಬಹುದೇ ?

ಇಂಥ ಕಥೆಗಳನ್ನು ಸಾಮಾನ್ಯವಾಗಿ ಎಲ್ಲರೂ ಕೇಳಿಯೇ ಇರುತ್ತಾರೆ. ಸರಳಸ್ವಭಾವದವರಾದರೆ ಎಲ್ಲವನ್ನೂ ನಂಬಿಬಿಡುತ್ತಾರೆ. ನಾಗರಿಕತೆಯ ಸುಳಿಯಲ್ಲಿ ಸಿಕ್ಕವರು ಅಡಗೂಲಜ್ಜಿ ಕಥೆಗಳೆಂದು ತಳ್ಳಿಹಾಕುತ್ತಾರೆ. ವಿಚಾರಪರರಾದವರು 'ಸಾಧ್ಯವಿರಬಹುದು, ಸಂಭವವಲ್ಲ' ಎನ್ನಬಹುದು. ನಾವು ಕೇಳುವ ಕಥೆಗಳಲ್ಲಿ ತಥ್ಯಾಂಶವೆಷ್ಟು, ಕೇಳುತ್ತ ಹೇಳುತ್ತ ಬೆಳೆಸಿಕೊಂಡ ಅಂಶಗಳೆಷ್ಟು ಎಂದು ನಿರ್ಧರಿಸುವುದು ಕಷ್ಟ. ನಡೆದ ಪ್ರಸಂಗಗಳನ್ನು ನಡೆದಂತೆಯೇ ನಿರೂಪಿಸಲು, ಕೇಳಿದುದನ್ನು ಕೇಳಿದಂತೆಯೇ ಹೇಳಲು ಒಂದು ಬಗೆಯ ಸಾಮರ್ಥ್ಯ ಇರಬೇಕು; ಅದು ಎಲ್ಲರಿಗೂ ಸಾಧ್ಯವಿರದು. ಇಲ್ಲದ ಅಂಶಗಳನ್ನು ನಾವು ಬೇಕೆಂದೇ ಸೇರಿಸುತ್ತೇವೆಂದಲ್ಲ. ನಮ್ಮ ಅರಿವಿಲ್ಲದೆಯೇ, ಇರುವ ಕೆಲವು ವಿವರಗಳು ಮರೆಯಾಗುತ್ತವೆ, ಮಾರ್ಪಡುತ್ತವೆ ;

ಇಲ್ಲದ ವಿವರಗಳು ಸೇರಿಬಿಡುತ್ತವೆ. ಮನಸ್ಸಿನ ವ್ಯಾಪಾರವೇ ಹಾಗೆ.

ಮೇಲೆ ಹೇಳಿದ ಎರಡು ಪ್ರಸಂಗಗಳು ದೂರದರ್ಶನ (elairvoyance) ಕ್ಕೆ ಸಂಬಂಧಿಸಿದುವು. ನಿತ್ಯ ಜೀವನದಲ್ಲಿ ಎಲ್ಲರಿಗೂ ಯಾವಾಗಲೂ ಒದಗುವ ಅನುಭವಗಳೇನಲ್ಲ ಅವು. ಸಾಧ್ಯವಿದ್ದರೂ ಸಾಮಾನ್ಯವಲ್ಲ. ಕೆಲವರಿಗೆ ಹಲವು ವೇಳೆ, ಹಲವರಿಗೆ ಕೆಲವು ವೇಳೆ ಇಂಥ ಸಂಗತಿಗಳು ಕೈಗೂಡುವುದುಂಟು. ಅದೂ, ಯಾವುದಾದರೊಂದು ವಿಷಮ ಸಂದರ್ಭದಲ್ಲಿ ಮನಸ್ಸು ತಲ್ಲಣಗೊಂಡಾಗ, ಎದೆ ಬಿರಿದಾಗ, ದಿಕ್ಕು ತೋಚದೆ ಇದ್ದಾಗ, ಮುಂದೆ ನಡೆಯುವುದು ಹೇಗೋ ನಮಗೆ ತಿಳಿದುಬಿಡುತ್ತದೆ. ಇದು ಹಲವರ ಅನುಭವದಲ್ಲಿದೆ.

ಭವಿಷ್ಯವನ್ನು ಮನಸ್ಸಿನಲ್ಲಿ ಊಹಿಸಿಕೊಳ್ಳುವುದು, ಪರಿಕಲ್ಪಿಸಿಕೊಳ್ಳುವುದು ಬೇರೆಯ ಮಾತು; ದೂರದಲ್ಲಿ ನಡೆಯಬಹುದಾದ ಪ್ರಸಂಗಗಳನ್ನೂ ಹೀಗೆಯೇ ಊಹಿಸಿಕೊಳ್ಳಬಹುದು. ಆದರೆ ಪ್ರಸಂಗವು ಕಣ್ಣಿಗೆ ಕಟ್ಟಿದಂತೆ ಸ್ಪಷ್ಟವಾಗಿ ಮುಂದೆ ನಿಲ್ಲುವುದು ಇಲ್ಲಿ ಮುಖ್ಯವಾದುದು. ಮುಂದಾಗುವುದನ್ನು ಈಗಲೇ ತಿಳಿಯುವುದು, ಎಂದರೆ ಭವಿಷ್ಯದರ್ಶನ (precognition), ಕೆಲವರಿಗೆ ಅನುಭವ ಸಿದ್ಧವಾದುದು. ಆದರೆ ಇದರ ಕಡೆ ನಾವು ಗಮನವನ್ನು ಅಷ್ಟಾಗಿ ಹರಿಸುವುದಿಲ್ಲ. ಇದನ್ನೆಲ್ಲ ನಂಬಿದರೆ ಹೇಗೋ, ಇದನ್ನು ಬೇರೆಯವರಿಗೆ ಹೇಳಿದರೆ ಏನೆಂದುಕೊಂಡಾರೋ ಎನ್ನುವ ಅಳುಕು ನಮಗೆ.

ಅಳುಕು ಮಾತ್ರವಲ್ಲ, ಕೆಲವೊಮ್ಮೆ ಇಂಥ ಅನುಭವಗಳಿಂದ ಆತಂಕವೂ ಒದಗುತ್ತದೆ, ನಂಬದೆ ಇರುವುದೇ ಒಳಿತು ಎನ್ನಿಸುತ್ತದೆ. ನಂಬಿದರೆ ಇತರರ ನಿಂದೆಗೆ, ಸಮಾಜದ ಆಗ್ರಹಕ್ಕೆ

ತುತ್ತಾಗಬಹುದಾದ ಭೀತಿಯೂ ಇರುತ್ತದೆ. ಕೆಲವು ವೇಳೆ, ಮೇಲೆ ಹೇಳಿದಂಥ ದೂರದರ್ಶನದ ಅನುಭವ ಪ್ರಬಲವಾಗಿದ್ದು ಆತಂಕಕ್ಕೆ ಎಡೆಮಾಡಿಕೊಡುತ್ತದೆ; ಕೆಲವು ಸಂದರ್ಭಗಳಲ್ಲಿ ಇದರಿಂದಾಗಿ ಜನ ಸಭ್ಯತೆಯ ಹಿಡಿತದಿಂದ ಬಿಡಿಸಿಕೊಂಡು ಅನುಭವದಲ್ಲಿಯೇ ವಿವಶರಾಗಿ ಪಾಲ್ಗೊಳ್ಳುವುದೂ ಇದೆ.

ಕಳೆದ ಮಹಾಯುದ್ಧದ ಸಮಯದಲ್ಲಿ ಇಂಗ್ಲೆಂಡಿನ ಊರೊಂದರಲ್ಲಿ ಈ ಪ್ರಸಂಗ ಜರುಗಿತು. 1945ರ ನವೆಂಬರ್ ಹದಿನೆಂಟನೆಯ ದಿನದಂದು, ಆ ರಾತ್ರಿ ಒಬ್ಬಾತ ತನ್ನ ಹೆಂಡತಿ ಅಳುತ್ತಿರುವುದನ್ನು ಕೇಳಿ ಎಚ್ಚರಗೊಂಡು ಎದ್ದ. ಹೆಂಡತಿ ತನ್ನ ಮಗ ಸತ್ತನೆಂದು ಹೇಳಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಅವರ ಮಗನೇನೋ ಸೈನ್ಯಕ್ಕೆ ಸೇರಿದ್ದ; ಆ ಸಮಯದಲ್ಲಿ ಯುದ್ಧ ನಡೆಯುತ್ತಿದ್ದ ಕಡೆಯೇ ಇದ್ದ. ಆದರೆ ಅಲ್ಲಿ ದುರಂತವೇನು ನಡೆದ ಸುದ್ದಿ ಬಂದಿರಲಿಲ್ಲ. ಗಂಡ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದ. ಆಕೆಯಂತೂ ತಡೆಹಿಡಿಯಲಾರದ ದುಃಖದಿಂದ ಕಂಗಾಲಾಗಿದ್ದಳು. ವೈದ್ಯರು ಬಂದು ನಿದ್ರೆ ತರುವ ಮದ್ದನ್ನು ಕೊಡಬೇಕಾಯಿತು.

ಇದಾದ ಕೆಲವು ದಿನಗಳ ಮೇಲೆ ಮತ್ತೆ ಆಕೆ ಹೀಗೆಯೇ ಮಗ ಸತ್ತನೆಂದು ಗೋಳಾಡತೊಡಗಿದಳು. ಕಾರಣವೇ ಇಲ್ಲದೆ ಹೀಗೆ ಅಳುತ್ತ, ಊಟ-ನಿದ್ರೆ ಬಿಟ್ಟು, ಹಟ ಹಿಡಿದು ಕುಳಿತಿದ್ದ ಹೆಂಡತಿಯನ್ನು ಹುಚ್ಚರ ಆಸ್ಪತ್ರೆಗೆ ಸೇರಿಸಿಯೂ ಆಯಿತು. ಆದರೆ ಇದಾದ ಮರುದಿನವೇ ಯುದ್ಧರಂಗದಿಂದ ಅವರಿಗೆ ತಮ್ಮ ಮಗ ನವೆಂಬರ್ ಹದಿನೇಳನೆಯ ದಿನ ಹಠಾತ್ತಾಗಿ ತೀರಿಕೊಂಡನೆಂದು ತಂತೀ ಸಮಾಚಾರ ಬಂದಿತು! ಯುದ್ಧಕ್ಕೆ ಹೋದ ಮಗನ ವಿಚಾರವಾಗಿ ತಾಯಿಗೆ ಆತಂಕ

ವಿರುವುದು ಸಹಜವೇ. ಆದರೆ ದೂರದಲ್ಲಿ ನಡೆದ ದುರ್ಘಟನೆ ನಡೆದೊಡನೆಯೇ ಈಕೆಗೆ ತಿಳಿದುದು ಹೇಗೆ? ಮನಸ್ಸಿನ ಕಾತರ ಹೀಗೆ ಸಮಯವನ್ನು ಸಾಧಿಸಬಲ್ಲುದೆ?

ಇಂಥ ನೂರಾರು ಪ್ರಸಂಗಗಳು ಸಾಧಾರವಾಗಿ ಪ್ರಕಟವಾಗಿವೆ. ಅವೆಲ್ಲವನ್ನೂ ಸುಳ್ಳೆಂದು ಬದಿಗೊತ್ತುವ ಹಾಗಿಲ್ಲ. ವಿಶ್ವಾಸಾರ್ಹರಾದ ವಿಜ್ಞಾನಿಗಳೇ ಅವುಗಳನ್ನು ನಿರೂಪಿಸಿರುವ ಸಂದರ್ಭವೂ ಉಂಟು. ಲಿವರ್‌ಪೂಲ್ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕನಾಗಿದ್ದ ಸುಪ್ರಸಿದ್ಧ ವಿಜ್ಞಾನಿ ಸರ್ ಆಲಿವರ್ ಲಾಜ್, ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹೆನ್ರಿ ಸಿಜ್‌ವಿಕ್, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಗಿಲ್‌ಬರ್ಟ್ ಮರ್ರೆ, ಸರ್ ವಿಲಿಯಂ ಬ್ಯಾರೆಟ್, ಜರ್ಮನಿಯ ವೈದ್ಯ ಕಾರ್ಲ್ ಬ್ರುಕ್, ಫ್ರಾನ್ಸ್ ದೇಶದ ಇಂಜಿನಿಯರ್ ರಿನಿ ವೊರ್‌ಕೊಲಿ, ವಿಜ್ಞಾನಿ ರುಡಾಲ್ಫ್ ಟಿಷ್ನರ್ ಮೊದಲಾದವರು ಇಂಥ ಸಂಗತಿಗಳನ್ನು ತಿಳಿಸಿದ್ದಾರೆ. ಇವರೆಲ್ಲರೂ ವಿಚಾರವಂತರು, ಪ್ರತಿಭಾಶಾಲಿಗಳು, ಅನ್ವೇಷಕರು, ತಂತಮ್ಮ ಕ್ಷೇತ್ರಗಳಲ್ಲಿ ಸಿದ್ಧಿ ಪಡೆದವರು. ಇವರ ಹೇಳಿಕೆಗಳನ್ನು ಸುಳ್ಳೆನ್ನುವುದು ಹೇಗೆ? ಸಂಗತಿಗಳ ವಿವರಣೆ ಸ್ಪಷ್ಟವಾಗಿಲ್ಲ ಎಂಬಷ್ಟೇ ಕಾರಣದಿಂದ ಸಂಗತಿಗಳೇ ಅಸಂಗತ ಎನ್ನುವುದಾದರೂ ಹೇಗೆ?

ಉಪನಿಷತ್ತಿನಲ್ಲಿ ಒಂದು ಸೂಚನೆ ಬರುತ್ತದೆ—'ಅಸ್ತೀತಿ ಚೇದ್ವೇದ, ಸಂತಮೇನಂ ತತೋ ವಿದುಃ' ಎಂದು. 'ಇದೆಯೆಂದು ಮೊದಲು ತಿಳಿ, ಅನಂತರ ಇರುವುದನ್ನು ತಿಳಿಯ ಬಹುದು' ಎಂದು ಅದರ ಅರ್ಥ. ಈ ಸೂತ್ರ ಇಲ್ಲಿಯೂ ಮಾನ್ಯವೇ. ಸೋಜಿಗವೆನಿಸಿದವೂ, ವಿಚಿತ್ರವೆನಿಸಿದರೂ ಇಂಥ

ಪ್ರಸಂಗಗಳು ನಡೆಯುವುದುಂಟು ಎಂದು ನಾವು ಒಪ್ಪಿಕೊಳ್ಳ ಬೇಕು. ವಿವರಣೆ ಅಷ್ಟು ಸುಲಭಸಾಧ್ಯವಂತೂ ಅಲ್ಲ. ಸಂಶೋಧನೆ ಹೆಚ್ಚು ಹೆಚ್ಚು ನಡೆದಾಗಲೇ ವಿವರಣೆ ಸ್ಪಷ್ಟವಾಗುವುದು. ಅಲ್ಲಿಯವರೆಗೆ ಸಹನೆಯಿರಬೇಕು, ತೆರೆದ ಮನಸ್ಸಿರಬೇಕು.

## ಪುನರ್ಜನ್ಮ

ಈ ವಿಚಾರ ಪ್ರಸ್ತಾಪಿಸುವಾಗ ಪುನರ್ಜನ್ಮದ ಕಲ್ಪನೆ ಅವಶ್ಯವಾಗಿ ಸೇರಿ ಬರುತ್ತದೆ. ನಮ್ಮ ದೇಶದಲ್ಲಿಯಂತೂ ಈ ಕಲ್ಪನೆ ದೃಢವಾಗಿದೆಯಷ್ಟೆ. ಎಲ್ಲ ಧರ್ಮಗಳಲ್ಲಿಯೂ ಇದರ ಪ್ರಕ್ರಿಯೆ ಬಳಕೆಯಲ್ಲಿದೆ. ಇಸ್ಲಾಂ ಧರ್ಮ ಇದಕ್ಕೆ ಅಪವಾದ ಎನ್ನಬಹುದೇನೋ. ಆದರೆ ವಿಜ್ಞಾನದ ದಾರಿ ಹಿಡಿದು ವಿದ್ಯಾವಂತರಾದವರ ಅಭಿಪ್ರಾಯವೇನು ? ಪುನರ್ಜನ್ಮವನ್ನು ತಾತ್ತ್ವಿಕವಾಗಿ ನಂಬಿದರೂ, ವಾಸ್ತವವಾಗಿ ಅದು ಜರುಗುತ್ತದೆ ಎನ್ನಲು ಆಧಾರ ಸಾಲದು ಎಂದೇ ಅವರ ಸಾಮಾನ್ಯ ತಿಳುವಳಿಕೆ. ಸತ್ತು, ಮರಳಿ ಜೀವಲೋಕಕ್ಕೆ ಬಂದು ಮರಣಾನಂತರದ ಸ್ಥಿತಿಯನ್ನು ಹೇಳಬಲ್ಲವರು ಯಾರೂ ಇಲ್ಲ. ಸತ್ತವನು ಮತ್ತೆ ಜನ್ಮವೆತ್ತಿ ಹಿಂದಿನದನ್ನೆಲ್ಲ ನೆನೆಸಿಕೊಳ್ಳುವುದೂ ಸಾಮಾನ್ಯವಾಗಿ ನಮ್ಮ ಅನುಭವದಲ್ಲಿಲ್ಲ.

ಸಾವೆನ್ನುವುದೇ ಒಂದು ಸೋಜಿಗದ ಸ್ಥಿತಿ. ಅದರಾಚೆ ಏನಿದೆಯೋ ಯಾರು ಬಲ್ಲರು ? ಧರ್ಮದ ವಿವರಗಳಲ್ಲಿ ಪುನರ್ಜನ್ಮದಲ್ಲಿ ವಿಶ್ವಾಸವೂ ಒಂದು. ಹಾಗೆಂದೇ ನಾವು ಅದನ್ನು ನಂಬಿದ್ದೇವೆ. ಸತ್ತವರನ್ನು ಮತ್ತೆ ಎಬ್ಬಿಸಿ, ಅವರನ್ನು

ಜೀವಂತರಾದವರೊಂದಿಗೆ ಸಂಪರ್ಕದಲ್ಲಿರಿಸುವುದು ಸಾಧ್ಯವೆಂದು ಅಧ್ಯಾತ್ಮವಾದಿಗಳು (spiritualists) ಹೇಳುತ್ತಾರೆ. ದಿವ್ಯಜ್ಞಾನ ಅಥವಾ ಥಿಯಾಸಫಿ ತನ್ನ ಆರಂಭ ದಿನಗಳಲ್ಲಿ ಹೀಗೆ ಮೃತ-ಜೀವಂತ ಸಮಾಗಮವನ್ನು ಒದಗಿಸುವ ರಹಸ್ಯಮಂಡಲ ಗಳನ್ನು ಏರ್ಪಡಿಸುತ್ತಿದ್ದಿತು. ಮೃತಕನಾದ ಜೀವನು ತನ್ನ ಅಭಿವ್ಯಕ್ತಿಗೆ ಅನುಕೂಲವೆನಿಸಿದ ಮನುಷ್ಯನ (medium) ಮೇಲೆ ಆವಿಷ್ಟನಾಗಿ ಉಳಿದವರಿಗೆ ತನ್ನ ಆಕಾಂಕ್ಷೆ–ಆತಂಕಗಳನ್ನು ತಿಳಿಸುವನೆಂದು ಈ ಮಂಡಲದವರ ನಂಬಿಕೆಯಿದ್ದಿತು. ದೇವತೆಯೋ ಭೂತವೋ ಮನುಷ್ಯರ ಮೇಲೆ ಆವೇಶ ಬರುವುದು ಬೇರೆ ಮಾತು. ಆದರೆ ಸಾಮಾನ್ಯ ಮನುಷ್ಯ ತೀರಿ ಕೊಂಡ ಮೇಲೂ ಸಂಸಾರದಲ್ಲಿಯೇ ಉಳಿದುಕೊಳ್ಳುವುದು ಬಿಡಿಸಲಾರದ ಒಗಟು.

ಧರ್ಮದಲ್ಲಿ ಬುನಾದಿಯಾಗಿರುವ ವಿಶ್ವಾಸ ಇದು— ಜೀವವಸ್ತು ಶಾಶ್ವತವಾದುದು, ಸಾವೆನ್ನುವುದು ಅದರ ವಿಚ್ಛೇದ ವಾಗಲಾರದು. ಸಾವಿನಲ್ಲಿ ಜೀವ ಒಂದು ದೇಹವನ್ನು ಬಿಟ್ಟು ಇನ್ನೊಂದು ದೇಹವನ್ನು ಪಡೆಯುತ್ತದೆ, ಅಷ್ಟೆ. ದೇಹಾಂತರ ಪ್ರಾಪ್ತಿಯಲ್ಲಿ ದೇಹಿಯೆನಿಸುವ ಜೀವ ಉಳಿದೇ ಇರುತ್ತಾನೆ. ಈ ನಿಲುವನ್ನು ಹೊಂದಿದ ಎಲ್ಲ ಧರ್ಮಗಳೂ ಪುನರ್ಜನ್ಮವನ್ನು ನಂಬುತ್ತವೆ. ಪುನರ್ಜನ್ಮ ಸಿದ್ಧವಾದ ಮೇಲೆ ಪೂರ್ವಜನ್ಮ ಸ್ಮೃತಿಯೂ ಸಾಧ್ಯವೇ ಇರಬೇಕಲ್ಲವೆ ? ಜೈನ, ಬೌದ್ಧ, ಹಿಂದೂ ಸಂಪ್ರದಾಯಗಳ ಯೋಗ ಸಾಧನೆಯಲ್ಲಿ ಆವರಣಗಳು ಕಳಚಿ ಬಿದ್ದಾಗ ಪೂರ್ವಾನುಸ್ಮೃತಿ ಒದಗುವುದೆಂದು ನಂಬಿಕೆಯಿದೆ. ಆದರೆ ಸಾಧನೆಯಿಲ್ಲದೇ ಪೂರ್ವಜನ್ಮಸ್ಮರಣೆ ಇರುವ ಕೆಲವರು ಆಗಾಗ ಬೆಳಕಿಗೆ ಬರುತ್ತಿರುತ್ತಾರೆ,

ವೃತ್ತ ಪತ್ರಿಕೆಗಳಲ್ಲಿಯೂ ಇವರ ವಿವರಗಳು ಪ್ರಕಟವಾಗುತ್ತಿರುತ್ತವೆ. ಅವೆಲ್ಲವೂ ದಿಟವೇ ಎಂದು ಸಾಧಿಸುವುದು ತಪ್ಪಾದೀತು. ಉತ್ಪ್ರೇಕ್ಷೆಗಳು, ಕಲ್ಪನೆಗಳು, ವಿಪರ್ಯಾಸಗಳು ಒದಗಿಬರುವುದು ಸಹಜ. ಆದರೆ ಮೂಲಭೂತವಾಗಿ ಈ ಪೂರ್ವಜನ್ಮ ಸ್ಮೃತಿ ಅಸಂಭವವಲ್ಲವೆಂದು ಸ್ಪಷ್ಟವಾಗಿದೆ.

ಆಗರಾ ನಗರದಲ್ಲಿ ಪೋಸ್ಟ್‌ಮಾಸ್ಟರ್ ಆಗಿದ್ದ ಭಾರ್ಗವ ಎಂಬ ಸದ್ಗೃಹಸ್ಥರ ಮಗಳು, ಎರಡು ವರ್ಷ ವಯಸ್ಸಿನ ಮಂಜುಲತಾ, ತಾನು ಇಲ್ಲಿ ಹುಟ್ಟುವ ಮೊದಲು ಧುಲಿಯಾ ಗಂಜಿನ ಮನೆಯೊಂದರಲ್ಲಿ ಇದ್ದುದಾಗಿ ಹೇಳಿದಳು. ಆ ಊರಿಗೆ ಅವಳನ್ನು ಕರೆದೊಯ್ದಾಗ ತಾನಿದ್ದ ಮನೆಯನ್ನೂ ಗುರುತಿಸಿದಳು. ಪ್ರತಾಪಸಿಂಹ ಚತುರ್ವೇದಿ ಎನ್ನುವ ವಕೀಲರ ಮನೆ ಅದು. ಮನೆಯಲ್ಲಿನ ಹಲವಾರು ವಿವರಗಳನ್ನು ಹುಡುಗಿ ನಿಖರವಾಗಿ, ಚಕಾರ ತಪ್ಪದೆ ತಿಳಿಸಿದಳು. ವಕೀಲರ ತಮ್ಮ ವಿಶ್ವೇಶ್ವರನಾಥ ಎಂಬುವನ ಹೆಂಡತಿ 1952ರಲ್ಲಿ ತೀರಿಕೊಂಡಳೆಂದೂ, ಈ ಹುಡುಗಿ ಅದೇ ಸಮಯದಲ್ಲಿ ಹುಟ್ಟಿದಳೆಂದೂ ತಿಳಿದುಬಂದಿತು.

ಇನ್ನೊಂದು ಪ್ರಸಂಗ ಕ್ಯೂಬಾದಿಂದ ಪ್ರಕಟವಾದುದು. ಇನ್ನೊಂದು ಮಗು, ನಾಲ್ಕು ವರ್ಷದವನಿದ್ದಾಗಲೇ ತನ್ನ ಪೂರ್ವಜನ್ಮದ ತಂದೆ, ತಾಯಿಯರು, ಅಣ್ಣಂದಿರು, ಮನೆ, ನಡೆದ ಘಟನೆಗಳು ಇವುಗಳ ವಿವರಗಳನ್ನೆಲ್ಲ ಸ್ಪಷ್ಟವಾಗಿ ತಿಳಿಸಿದನು. ಆ ಮಗುವಿಗೆ ಈ ವಿವರಗಳೆಲ್ಲ ಹೇಗೂ ತಿಳಿದಿರಬಹುದಾದ ಸಂಭವವೇ ಇರಲಿಲ್ಲ.

ನಾರ್ತಂಬರ್‌ಲೆಂಡಿನಲ್ಲಿ ಪೋಲಾಕ್‌ದಂಪತಿಗಳಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಒಂದು ದಿನ ಅವರು ಮನೆಗೆ ಹಿಂದಿರುಗು

ತ್ತಿದ್ದಾಗ, ಅಪಘಾತಕ್ಕೆ ಸಿಕ್ಕಿ, ಕಾರೊಂದು ಅವರ ಮೇಲೆ ಹರಿದು ಇಬ್ಬರೂ ಸ್ಥಳದಲ್ಲಿಯೇ ಸತ್ತರು. ಈ ಘಟನೆ ನಡೆದ ಕೆಲವು ತಿಂಗಳುಗಳಲ್ಲಿ ಪೋಲಾಕ್‌ನ ಹೆಂಡತಿ ಅವಳಿ ಜವಳಿ ಹೆಣ್ಣು ಮಕ್ಕಳನ್ನು ಹೆತ್ತಳು. ಅದಕ್ಕೆ ಮೊದಲು ತಂದೆಗೆ ತನ್ನ ಹಿಂದಿನ ಮಕ್ಕಳೇ ಬರುತ್ತಾರೆ ಎಂದೆನಿಸುತ್ತಿದ್ದಿತಂತೆ; ಆದರೆ ಹೇಗೆಂದು ಅವನಿಗೆ ಅರ್ಥವಾಗಲಿಲ್ಲ. ಆದರೆ ಈ ಅವಳಿ ಜವಳಿ ಮಕ್ಕಳು ಬೆಳೆದಾಗ ಅವರು ತೀರಿಕೊಂಡ ಮಕ್ಕಳಂತೆಯೇ ಇದ್ದುದು ಸ್ಪಷ್ಟವಾಯಿತು. ಒಬ್ಬಳಿಗೆ ಮನೆಯಲ್ಲಿದ್ದ ಗೊಂಬೆಯೊಂದನ್ನು ಕೊಡಲು, "ಓ, ಇದೇ ನನ್ನ ಮೇರಿ!" ಎಂದಳು. ತೀರಿಕೊಂಡ ಮಗಳು ಗೊಂಬೆಗಿಟ್ಟ ಹೆಸರೇ ಅದು. ಇಬ್ಬರೂ ಆಟಪಾಟ ಆಡುತ್ತಿರುವಾಗ ಹಿಂದಿನ ಮಕ್ಕಳಂತೆಯೇ ಆಡುತ್ತಿದ್ದುದನ್ನು ಗಮನಿಸಿದ ತಂದೆ ತಾಯಿಯರಿಗೆ ಸೋಜಿಗವೆನಿಸಿತು. ಅಷ್ಟು ಮಾತ್ರವಲ್ಲದೆ, ಹಿಂದಿನ ಮಕ್ಕಳು ಅನುಭವಿಸಿದ ಕಾರಿನ ಅವಘಡವನ್ನು ಈ ಮಕ್ಕಳು ವಿಸ್ತಾರವಾಗಿ, ಯಥಾವತ್ತಾಗಿ ವರ್ಣಿಸುತ್ತಿದ್ದರು.

ಇಂಥ ಕಥೆಗಳು ನೂರಾರು ಬೆಳಕಿಗೆ ಬಂದಿವೆ. ಟಿಬೆಟ್‌ದೇಶ ಧರ್ಮಪ್ರಭುತ್ವವಾಗಿದ್ದಾಗ ಲಾಮಾ ಪೀಠಗಳಿಗೆ ಅಧಿಕಾರಿಗಳನ್ನು ಆರಿಸುವಾಗ ಪೂರ್ವಜನ್ಮ ಸ್ಮೃತಿಯನ್ನು ಗಮನಿಸುತ್ತಿದ್ದರು. ಒಬ್ಬ ಲಾಮಾ ತೀರಿಕೊಂಡಾಗ, ತನ್ನ ಉತ್ತರಾಧಿಕಾರಿಯಾಗಿ ತಾನೇ ಜನ್ಮವೆತ್ತುತ್ತಾನೆ ಎನ್ನುವ ನಂಬಿಕೆಯಿದ್ದಿತು. ಲಾಮಾ ಪೀಠಕ್ಕೆ ಉತ್ತರಾಧಿಕಾರಿ ಸಾಮಾನ್ಯವಾಗಿ ಹಸುಳೆ ಅಥವಾ ಸಣ್ಣ ಹುಡುಗನಾಗಿರುತ್ತಿದ್ದ. ಒಮ್ಮೆ ಒಂದು ಶ್ರೀಮಂತ ಮಠದ ಲಾಮಾ ತೀರಿಕೊಂಡ. ಅವನ ಉತ್ತರಾಧಿಕಾರಿಯನ್ನು ಹುಡುಕಲು ಮಠದ ನಿರ್ವಾಹಕರು

ಸಂಪ್ರದಾಯದಂತೆ ಬಹುಕಾಲ ಊರೂರು ಅಲೆದು, ಶಕುನಗಳನ್ನೂ ಸಂಕೇತಗಳನ್ನೂ ಅವಲಂಬಿಸಿ, ಯಾವುದೋ ಹಳ್ಳಿಯ ಮಗುವೊಂದನ್ನು ಆರಿಸಿದರು. ಆ ವೇಳೆಗಾಗಲೇ ಲಾಮಾ ತೀರಿಕೊಂಡು ನಾಲ್ಕು ವರ್ಷಗಳಾಗಿದ್ದುವು; ಮಠದವರು ಆರಿಸಿದ ಮಗುವಿಗೂ ನಾಲ್ಕು ವರ್ಷಗಳು.

ಹಲವಾರು ವಿವರಗಳಿಂದ ಮಠದ ನಿರ್ವಾಹಕರಿಗೆ ಈ ಮಗುವೇ ಲಾಮ ಎಂದು ಖಚಿತವಾಯಿತು. ಮಗುವನ್ನು ಲಾಮಾಸೆರಿ, ಎಂದರೆ ಲಾಮನ ಮಠವಿದ್ದ ಊರಿಗೆ ಕರೆತರುತ್ತಿರುವಾಗ, ಊಳಿಗದವನೊಬ್ಬ ನಸ್ಯ ಹಾಕಿಕೊಳ್ಳಲು ತನ್ನ ಬಳಿಯಿದ್ದ ಬೆಳ್ಳಿಯ ಡಬ್ಬಿಗಾಗಿ ತನ್ನ ಕಿಸೆಯನ್ನು ತಡುಕಾಡಿದ. ಒಡನೆಯೇ ಮಗು ಅವನ ಕಡೆ ಹಿರಿಯ ಸನ್ಯಾಸಿಗೆ ಸಹಜವಾದ ಗಾಂಭೀರ್ಯದಿಂದ ದಿಟ್ಟಿಸಿ ನೋಡಿ, "ಅದು ನನ್ನ ಡಬ್ಬಿ, ಕೊಡು! ಕಳುವು ಮಾಡಬಾರದು!" ಎಂದಿತು. ಊಳಿಗದವನು ಬೆಚ್ಚಿಬಿದ್ದ; ದಿಟವಾಗಿ, ತಾನಿರಿಸಿಕೊಂಡಿದ್ದ ನಸ್ಯದ ಬೆಳ್ಳಿ ಡಬ್ಬಿ ತೀರಿಕೊಂಡ ತನ್ನ ಒಡೆಯ ಲಾಮಾದಾಗಿದ್ದಿತು, ಅವನು ಅದನ್ನು ಕಳುವು ಮಾಡಿದ್ದುದು ನಿಜ.

ಮಠಕ್ಕೆ ಬಂದೊಡನೆಯೇ ಮಗು "ಬಲಕ್ಕೆ ತಿರುಗಿ; ಅದು ನನ್ನ ಕೋಣೆ" ಎಂದು ಪರಿವಾರದವರಿಗೆ ಹೇಳಿತು. ಆದರೆ ಬಲಭಾಗದಲ್ಲಿ ಗೋಡೆಯಿದ್ದಿತು; ತಿರುಗುವ ಹಾಗಿರಲಿಲ್ಲ. ಪರಿಜನರಿಗೆ ಆಶ್ಚರ್ಯವಾಯಿತು, ಗೋಡೆಯಿದ್ದಲ್ಲಿ ತಿರುಗೆಂದು ಮಗು ಹೇಳಿತೆಂದಲ್ಲ, ಅದಕ್ಕೆ ಹಿಂದಿನ ಲಾಮಾನ ಕೋಣೆಯ ಗುರುತು ಸಿಕ್ಕಿತೆಂದು. ಮಗು ತೋರಿಸಿದ ಕಡೆಯೇ ಕೋಣೆಯಿದ್ದುದು; ಲಾಮಾ ತೀರಿಕೊಂಡನಂತರ ಆ ಕೋಣೆಯನ್ನು ಮುಚ್ಚಿ ಗೋಡೆಯನ್ನು ಎಬ್ಬಿಸಿದ್ದರು. ಎಡ

ಭಾಗದ ಕೋಣೆಯೊಂದನ್ನು ಸಜ್ಜುಗೊಳಿಸಿ ಉತ್ತರಾಧಿಕಾರಿಗೆಂದು ಸಿದ್ಧಪಡಿಸಿದ್ದರು. ಮಗು ಆ ಊರಿಗೆ ಬಂದುದು ಅದೇ ಮೊದಲು; ಅದಕ್ಕೆ ಈ ವಿವರ ತಿಳಿದುದು ಹೇಗೆ?

ಮಗು ಅಧಿಕಾರ ಸ್ವೀಕಾರ ಮಾಡಿಕೊಳ್ಳುವ ಸಂದರ್ಭದಲ್ಲಿ, ಚಾ ಕುಡಿಯುವ ಬಟ್ಟಲೊಂದನ್ನು ಮಗುವಿನ ಮುಂದಿರಿಸಲಾಯಿತು. ಮಗು ಅದನ್ನು ನೋಡಿ "ಇದು ಬೇಡ, ನನ್ನದೇ ಬೆಳ್ಳಿಯ ಬಟ್ಟಲೊಂದು ಹಿಂದುಗಡೆ ಉಗ್ರಾಣದಲ್ಲಿ ಕೆಳಗಿನ ಪೆಟ್ಟಿಗೆಯಲ್ಲಿದೆ, ತನ್ನಿ" ಎಂದು ಹೇಳಿತು. ಪರಿವಾರದವರು ಅಚ್ಚರಿಯಿಂದ ಉಗ್ರಾಣಕ್ಕೆ ಹೋಗಿ, ಪೆಟ್ಟಿಗೆಯಲ್ಲಿ ನೋಡಲು ಹಿಂದಿನ ಲಾಮಾನ ಹೆಸರು ಮೂಡಿಸಿದ್ದ ಬೆಳ್ಳಿಯ ಬಟ್ಟಲೊಂದಿದ್ದಿತು. ಅದು ಅಲ್ಲಿದ್ದುದು ಮಠದ ಹಿರಿಯ ನಿರ್ವಾಹಕರಿಗೇ ತಿಳಿದಿರಲಿಲ್ಲ. ನಾಲ್ಕು ವರ್ಷದ ಮಗು ದೂರದ ಯಾವುದೋ ಹಳ್ಳಿಯಲ್ಲಿ ಹುಟ್ಟಿ ಬೆಳೆದು ಈ ಮಠದ ವಿಚಾರ ಏನನ್ನೂ ಅರಿಯುವುದು ಸಾಧ್ಯವಿರಲಿಲ್ಲ; ಈ ಊರಿಗೆ ಅದು ಬಂದುದು ಇದೇ ಮೊದಲು; ಇದಕ್ಕೆ ಮುಂಚೆ ಈ ಮಠವನ್ನು ಅದು ಕಂಡು ಕೇಳಿದುದೂ ಇಲ್ಲ. ಹೀಗಿದ್ದರೂ ಮಠದಲ್ಲಿ ಚಿರಪರಿಚಿತನಂತೆ ವ್ಯವಹರಿಸುವುದು ಸೋಜಿಗವೆನಿಸದೆ? ಆದರೆ ಟಿಬೆಟ್‌ದೇಶದ ಜನರಿಗೇನು ಇದು ಸೋಜಿಗವೆನಿಸದು ಪೂರ್ವಜನ್ಮದಲ್ಲಿ ಅವರ ವಿಶ್ವಾಸ ದೃಢವಾದುದು.

ಈ ನೆನಪು ಎಂಥದು? ನಮ್ಮ ಸಾಮಾನ್ಯ ನೆನಪಂತೂ ಅಲ್ಲ. ಸಾಧಾರಣವಾಗಿ ನೆನಪೆನ್ನುವುದು ಮಿದುಳಿನ ಕ್ರಿಯೆ, ಮಸ್ತಿಷ್ಕವ್ಯಾಪಾರ. ಹಿಂದೆ ನಡೆದ ಸಂಗತಿ ಮನಸ್ಸಿನ ಮೇಲೆ ಮುದ್ರೆಯನ್ನೊತ್ತಿ, ಆ ಮುದ್ರೆ ಮುಂದೆ

ಯಾವುದಾದರೂ ಕಾರಣದಿಂದ ಜಾಗ್ರತವಾದರೆ, ಉದ್ಬುದ್ಧ
ವಾದರೆ ಸ್ಮೃತಿ ಒದಗುತ್ತದೆ. ಇದು ಹೆಚ್ಚೋ ಕಡಮೆ
ಶರೀರಗತವಾದ ವ್ಯವಹಾರ. ಆದರೆ ಜನ್ಮಾಂತರದ ಸ್ಮೃತಿಯಲ್ಲಿ
ಮಸ್ತಿಷ್ಕವ್ಯಾಪಾರ ಇರುವುದು ಹೇಗೆ ? ಜೀವದ ನಿತ್ಯತೆಯನ್ನು
ರಂಬಿದರೂ, ಒಪ್ಪಿಕೊಂಡರೂ ದೇಹವಂತೂ ಸಂಪೂರ್ಣವಾಗಿ
ನಾಶವಾಗುವುದಷ್ಟೆ ? ಹೊಸ ಶರೀರದಲ್ಲಿ ಹೊಸ ಮಸ್ತಿಷ್ಕ ;
ಅದರಲ್ಲಿ ಹಳೆಯ ಸಂಸ್ಕಾರ ಉಳಿಯುವುದು ಸಾಧ್ಯವೆ ?

ಇವೆಲ್ಲ ಸಮಸ್ಯೆಗಳೇ. ಅದ್ಭುತ, ಅಸಾಧಾರಣ ಎನ್ನು
ವುದು ವರ್ಣನೆಯಷ್ಟೇ ; ವಿವರಣೆಯಲ್ಲ. ವಿವರಣೆಗಾಗಿ
ಹೆಣಗಾಡುವ ಜನ ಇರುವುದರಿಂದ ಸಮಸ್ಯೆಗಳು ಕೊಂಚಮಟ್ಟಿಗೆ
ಹರಿದಿವೆ.

# 2. ವೈಜ್ಞಾನಿಕ ಅನ್ವೇಷಣೆ

ವಿಜ್ಞಾನದಿಂದ ಸಿದ್ಧವಾದುದಷ್ಟೇ ಸತ್ಯ; ಉಳಿದುದೆಲ್ಲ ಭ್ರಮೆ, ಎನ್ನುವ ಮನೋವೃತ್ತಿ ನಮ್ಮಲ್ಲಿ ಬೆಳೆದುಬಂದಿದೆ. ಜಗತ್ತಿನ ರಹಸ್ಯಗಳನ್ನೂ ಮನುಷ್ಯಜೀವನದ ಮರ್ಮಗಳನ್ನೂ ಬಯಲಿಗೆಳೆಯಲು ವಿಜ್ಞಾನವೇನೋ ಶ್ರಮಿಸುತ್ತಿದೆ. ಕಲ್ಪನೆಗಳ ಕಾಡಿನಲ್ಲಿ ದಾರಿಗಾಣದೆ ಅಲೆದಾಡುವಂತೆ ಆಗಬಾರದೆಂದು ವಿಜ್ಞಾನವು ಪ್ರಯೋಗ ಸಂವಿಧಾನವನ್ನೂ ಇಂದ್ರಿಯ ಪ್ರಾಮಾಣ್ಯವನ್ನೂ ಎತ್ತಿ ಹಿಡಿದಿದೆ. "ಕಣ್ಣಿಗೆ ಕಂಡುದಷ್ಟೇ, ಕಂಡಷ್ಟೇ ದಿಟ. ಯಾವುದನ್ನಾಗಲೀ ನೋಡಿಯೇ ನಂಬಬೇಕು. ಇರುವುದಾದರೆ ಅದನ್ನು ಅಳೆಯುವುದು ಸಾಧ್ಯವಾಗಬೇಕು. ಅದನ್ನು ಪ್ರಯೋಗ ಶಾಲೆಯಲ್ಲಿ ತರಬೇಕು, ಇಂದ್ರಿಯಗಳಿಗೆ ಅಗೋಚರವಾದುದನ್ನೂ ಪ್ರಯೋಗಗಳಿಗೆ ಅಸಾಧ್ಯವಾದುದನ್ನೂ ನಂಬಬಾರದು" ಎನ್ನುವುದು ಸಾಮಾನ್ಯವಾಗಿ ವಿಜ್ಞಾನದ ನಿಲುವು.

ವಿಜ್ಞಾನದ ಬಲದಿಂದ ಉದ್ಯಮ ಯಶಸ್ವಿಯಾದಾಗ, ಬದುಕಿನ ಅನುಕೂಲ ಹೆಚ್ಚಿದಾಗ ವಿಜ್ಞಾನಕ್ಕೆ ಹೆಚ್ಚಿನ ಹಿರಿಮೆ ಒದಗಿತು; ವಿಜ್ಞಾನದ ಮನೋಧರ್ಮ ಪ್ರಚಲಿತವಾಯಿತು. ಸಾಮಾನ್ಯಜನರೂ ವಿಜ್ಞಾನದ ನಿಲುವನ್ನು ಅಳವಡಿಸಿಕೊಳ್ಳ ತೊಡಗಿದರು. ವಿಜ್ಞಾನಿಗಳಲ್ಲದವರೂ ವಿಜ್ಞಾನದ ಅಗತ್ಯವನ್ನು ಮನಗಂಡರು. ಪ್ರಯೋಗಕ್ಕೆ, ಇಂದ್ರಿಯಾನುಭವಕ್ಕೆ ವಿಶೇಷ

ಗೌರವ ದೊರೆಕಿತು. ಪ್ರಪಂಚದ ಕಲ್ಯಾಣಕ್ಕೆ ವಿಜ್ಞಾನವೇ ಸಾಧನ ಎನ್ನುವುದನ್ನು ಎಲ್ಲರೂ ಒಪ್ಪಿಕೊಂಡರು.

ಆದರೆ ವಿಜ್ಞಾನವೆನ್ನುವುದೇ ಕೇವಲ ಒಂದು ಜ್ಞಾನಸಾಧನ. ಅದರ ಯೋಗ್ಯತೆಗೆ ತಕ್ಕಷ್ಟು, ಅದರ ಉಪಾಧಿಗಳಿಗೆ ಸಿಕ್ಕುವಷ್ಟು, ಅದರ ವ್ಯಾಪ್ತಿ ಇರುವಷ್ಟು ಮಾತ್ರ ವಿವರಗಳನ್ನು ಅದು ಗ್ರಹಿಸಬಲ್ಲುದು. ಪಾತ್ರೆಯು ಗಾತ್ರದಷ್ಟು ನೀರನ್ನು ಅದರಲ್ಲಿ ತುಂಬಬಹುದು; ಆದರೆ ನದಿಯ ನಿರೆಲ್ಲ ಅಷ್ಟೇ ಎನ್ನಲಾದೀತೇ ? ಅಳತೆಗೋಲು ಇದ್ದಂತೆ ಅಳತೆ ತಿಳಿಯುತ್ತದೆ; ಆದರೆ ಆಳತೆಗೆ ಅಳತೆಗೋಲನ್ನು ಅಳವಡಿಸಬೇಕಲ್ಲವೆ ? ವಿಜ್ಞಾನ ಸದ್ಯದ ಪರಿಕರಗಳನ್ನು ಅವಲಂಬಿಸಿ ಪ್ರಪಂಚದ ವಿವರಗಳನ್ನು ತಿಳಿಯ ಲೆತ್ನಿಸುತ್ತದೆ. ಪರಿಕರಗಳ ಮಿತಿಯು ಜ್ಞಾನದ ಮಿತಿಯನ್ನು ನಿರ್ಧರಿಸುವುದು ಸಹಜ, ಅನಿವಾರ್ಯ. ಪರಿಕರಗಳ ನೆರವಿನಿಂದ ಒದಗಿದುದಷ್ಟೇ ಜ್ಞಾನ; ಅವುಗಳ ಮಿತಿಯನ್ನು ಮೀರಿದುದು ಕಲ್ಪನೆ ಎನ್ನುವುದು ಸಲ್ಲದು.

ಅಷ್ಟಲ್ಲದೆ, ವಿಜ್ಞಾನವೂ ಕಾಲಾನುಕ್ರಮದಲ್ಲಿ ಬೆಳೆಯುತ್ತಿರುವ ಸಾಧನ; ದಿನೇ ದಿನೇ ಅದು ಪ್ರೌಢವಾಗುತ್ತಿದೆ. ಈಗಿರುವ ನೆಲೆಯೇ ಪ್ರೌಢಿಮೆಯ ಪರಾಕಾಷ್ಠತೆ ಎಂದರೆ ಹೇಗೆ ? ಪ್ರಪಂಚವನ್ನು ಹೆಚ್ಚು ಹೆಚ್ಚು ತಿಳಿಯಬೇಕೆನ್ನುವ ಕಾತರದಿಂದ ಅದರ ಸಾಮಗ್ರಿಗಳು ಸಿದ್ಧವಾಗುತ್ತಿವೆ, ಪರಿಕರಗಳು ಪ್ರೌಢವಾಗುತ್ತಿವೆ, ಉಪಕರಣಗಳು ಜಟಿಲವಾಗುತ್ತಿವೆ. ಒಂದು ಕಾಲದಲ್ಲಿ ಪ್ರಚಲಿತವಾದ ನಿಲುವೇ ಸಿದ್ಧಾಂತವಲ್ಲ. ಇರುವ ಎಲ್ಲ ವಿವರಗಳನ್ನೂ ಒಮ್ಮೆಗೇ ಅಶೇಷವಾಗಿ ಹಿಡಿದು ಕೊಳ್ಳುವೆನೆಂಬ ವಿಶ್ವಾಸ ಪ್ರಾಮಾಣಿಕನಾದ ಯಾವ ವಿಜ್ಞಾನಿಗೂ

ಇರುವುದಿಲ್ಲ. ವಿಜ್ಞಾನದ ಹಿಡಿತಕ್ಕೆ ಸಿಗದ ವಿವರಗಳು ಅಸಂಖ್ಯ ಎಂದು ಎಲ್ಲ ವಿಜ್ಞಾನಿಗಳಿಗೂ ತಿಳಿದಿದೆ.

ಹಿಂದೆ ಕಾಣಸಿಗದಿದ್ದ ವಿವರಗಳು ಇಂದು, ಸಾಮಗ್ರಿಗಳ ಸೌಲಭ್ಯದಿಂದ, ಕಾಣಬರುತ್ತಿವೆ; ಹಿಂದೆ ಅಸ್ಪಷ್ಟವಾಗಿದ್ದದ್ದು ಈಗ ಸ್ಪಷ್ಟವಾಗಿದೆ. ಎಂದ ಮೇಲೆ, ಇಂದು ಇನ್ನೂ ಅಸ್ಪಷ್ಟವಾಗಿಯೇ ಉಳಿದಿರುವುದು ಮುಂದೆ ಸ್ಪಷ್ಟವಾದೀತೆಂದು ಬಗೆಯಬಹುದಲ್ಲವೆ? ಸ್ಪಷ್ಟವಾಗುವ ಸಂಭವವಂತೂ ಉಂಟಲ್ಲ? ಇಂದು ನಾವು ನಂಬಲಾರದುದು ಎಂದಿಗೂ ಹಾಗೆಯೇ ಉಳಿಯಲಾರದು; ನಂಬುವ ಕಾಲ ಬಂದೀತು. ವಿಜ್ಞಾನದ ಇತಿಹಾಸದಲ್ಲಿ ಇದು ನಡೆದಿದೆ, ಈಗ ನಡೆಯುತ್ತಿದೆ. 'ಇದು ಹೀಗೆಯೇ, ಇದು ಇಷ್ಟೇ, ಇನ್ನೇನೂ ಇರದು' ಎನ್ನುವ ಛಲವಂತೂ ವಿಜ್ಞಾನದಲ್ಲಿ ಅನುಚಿತ.

**ಅನುಸಂಧಾನದ ಆರಂಭ**

ಈಗ್ಗೆ ಸುಮಾರು ನೂರು ವರ್ಷಗಳ ಹಿಂದೆ, ವೈಜ್ಞಾನಿಕ ಮನೋವೃತ್ತಿಯ ಕೆಲವರು ಅತೀಂದ್ರಿಯದರ್ಶನ, ಅಲೌಕಿಕ ಘಟನೆ, ಅಭೌತಿಕಸಂಪರ್ಕ, ಪೂರ್ವಜನ್ಮಸ್ಮೃತಿ, ಭವಿಷ್ಯದ್ದರ್ಶನ ಮೊದಲಾದ ವ್ಯಾಪಾರಗಳನ್ನು ಕುರಿತು ಪರಾಮರ್ಶೆ ಮಾಡತೊಡಗಿದರು. ಮೊದಲ ಘಟ್ಟದಲ್ಲಿಯೇ ಪ್ರಯೋಗದ ಪಾತ್ರ ಪೇಗಿದ್ದೀತು ? ಕೇಳಿದ ವಿವರಗಳನ್ನು ಕಲೆಹಾಕುವುದು, ಪೂರ್ವಾಪರಗಳನ್ನು ಸಾಧ್ಯವಾದಮಟ್ಟಿಗೆ ಸಂಗ್ರಹಿಸುವುದು, ವಿವರಗಳಲ್ಲಿ ಒಂದು ವ್ಯವಸ್ಥೆಯನ್ನು ಏರ್ಪಡಿಸುವುದು, ಪ್ರಸಂಗಗಳನ್ನು ವರ್ಗೀಕರಿಸುವುದು,ಸಂಬಂಧಪಟ್ಟ ವ್ಯಕ್ತಿಗಳನ್ನು

ಕಂಡು ನಿಖರವಾದ ವಿವರಗಳನ್ನು ಪಡೆದುಕೊಳ್ಳುವುದು, ಸಾಕ್ಷ್ಯಗಳನ್ನು ಸಿದ್ಧಪಡಿಸುವುದು ಇವೆಲ್ಲವೂ ಈ ಪರಾಮರ್ಶೆಯ ಅವಧಿಯಲ್ಲಿ ನಡೆದುವು. ಆದರೆ ಪ್ರಯೋಗಶರಣರಾದ ವಿಜ್ಞಾನಿಗಳು ಈ ಪರಾಮರ್ಶಕರನ್ನು ಮುಗ್ಧರೆಂದು ಪರಿಗಣಿಸಿದರು. ಇಂದ್ರಿಯಾತೀತವಾದುದನ್ನು ನಂಬುವುದು ಸಲ್ಲದೆಂದು ಅವರ ವಾದ.

ಈ ಕ್ಷೇತ್ರದಲ್ಲಿ ವೈಜ್ಞಾನಿಕ ಅನ್ವೇಷಣೆ ಹೇಗೆ ಸಾಧ್ಯ ಎಂದು ಇತರ ವಿಚಾರಪರರೂ ಪ್ರಶ್ನಿಸತೊಡಗಿದರು. ಭೌತಿಕವಲ್ಲದ ಆತ್ಮ, ಅಂತಃಕರಣ, ಚೇತನ ಇವುಗಳ ವ್ಯಾಪಾರಕ್ಕೂ ವಿಜ್ಞಾನಕ್ಕೂ ಏನು ಸಂಬಂಧ? ಪುರಾಣ ಪ್ರಸಂಗಗಳು ಎಷ್ಟು ವಿಶ್ವಾಸಾರ್ಹವೋ ಇವೂ ಅಷ್ಟೇ ಅಲ್ಲವೆ? ವೈಜ್ಞಾನಿಕ ಅನ್ವೇಷಣೆಯ ಭೂಮಿಕೆಯೇ ಬೇರೆ, ಆಧ್ಯಾತ್ಮದ ರಂಗವೇ ಬೇರೆ; ಎರಡರ ಮೇಳ ಉಚಿತವೇ? ಪ್ರತ್ಯಕ್ಷಪ್ರಯೋಗವೇ ಪರಮಾಂತಿಕವೆಂದು ನಂಬಿದ್ದ ವೈಜ್ಞಾನಿಕ ಸನಾತನಿಗಳ ಪ್ರಭಾವ ವ್ಯಾಪಕವಾಗುತ್ತಿದ್ದಾಗ ಮೇಲೆ ಹೇಳಿದ ಪರಾಮರ್ಶೆಯನ್ನು ಸಂಶಯಗ್ರಸ್ತ ದೃಷ್ಟಿಯಿಂದ ನೋಡಿದವರೇ ಬಹಳ ಮಂದಿ.

ಅವರ ನಿರಾದರ, ಪ್ರತಿಭಟನೆ, ಅವಹೇಳನಗಳಿಗೆ ಅಂಜದೆ, ಅಳುಕದೆ ಅತಿಲೌಕಿಕ ಪ್ರಸಂಗಗಳ ಅನುಸಂಧಾನದಲ್ಲಿಯೇ ನಿರತರಾದವರು 1871ರಲ್ಲಿ ಲಂಡನ್ ನಗರದಲ್ಲಿ ನೆರೆದು ಈ ಅಸ್ಪಷ್ಟ, ಉಪೇಕ್ಷಿತ ಕ್ಷೇತ್ರದಲ್ಲಿ ವ್ಯವಸ್ಥಿತವಾಗಿ ಉತ್ಸಾಹದಿಂದ ಉದ್ಯಮ ಮಾಡಲು ನಿರ್ಧರಿಸಿದರು. ಇಂಗ್ಲೆಂಡಿನ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಕೆಲಸಮಾಡುತ್ತಿದ್ದ ಕೆಲವು ಪಂಡಿತರು ಇದರಲ್ಲಿ ಆಸಕ್ತಿವಹಿಸಿದರು. ಗಂಭೀರಪ್ರವೃತ್ತಿಯ ವಿದ್ಯಾವಂತರು ಇಂಥ ಪ್ರಸಂಗಗಳನ್ನು ಗಂಭೀರವಾಗಿಯೇ ತಿಳಿಯಪಡಿಸಿದಾಗಲೂ

ಅವುಗಳ ಬಗ್ಗೆ ವೈಜ್ಞಾನಿಕ ಅನುಸಂಧಾನ ನಡೆಯದೇ ಇರುವುದು ಈ ಜಾಗ್ರತಯುಗದಲ್ಲಿ ಅಪಮಾನಕರ ಎಂದು ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಹೆನ್ರಿ ಸಿಜ್‌ವಿಕ್ ವಾದಿಸಿದ.

ಈ ಸಭೆ ನಡೆದ ಹನ್ನೊಂದು ವರ್ಷಗಳನಂತರ 'ಅಭೌತಿಕ ಸಂಶೋಧನ ಸಮಾಜ' (Society for Psychical Research) ಎಂಬ ವಿದ್ವದ್ಗೋಷ್ಠಿಯು ಮೈದಳೆಯಿತು. ವಿಲಿಯಂ ಬ್ಯಾರೆಟ್ ಎಂಬ ಭೌತವಿಜ್ಞಾನಿ, ಸ್ಟೇಟನ್ ಮೋಸಸ್ ಎಂಬ ಕ್ರೈಸ್ತಪ್ರಚಾರಕ ಮತ್ತು ಎಫ್. ಡಬ್ಲ್ಯು. ಎಚ್. ಮೈಯರ್ಸ್ ಎಂಬ ವಿದ್ವಾಂಸ ಇವರು ಮೂವರು ಕೇಂಬ್ರಿಜ್ ಸಭೆಯ ಸ್ಫೂರ್ತಿಯನ್ನು ಪಡೆದು ಲಂಡನ್ ನಗರದಲ್ಲಿ ಒಂದು ಅನುಸಂಧಾನಕೇಂದ್ರವನ್ನು ಏರ್ಪಡಿಸಿಕೊಂಡರು. ಬ್ರಿಟನ್ನಿನ ಸುಪ್ರಸಿದ್ಧ ಮೇಧಾವಿಗಳಲ್ಲಿ ಹಲವರು ಈ ಕೇಂದ್ರದಲ್ಲಿ ಆಸಕ್ತಿ ವಹಿಸಿದರು. ವಿದ್ಯಾವಂತರ ವರ್ಗದಲ್ಲಿ ಈ ಅನುಸಂಧಾನಕ್ಕೆ ಮರ್ಯಾದೆ ದೊರೆಕಿತು.

ಇಂದ್ರಿಯಗಳ ನೆರವಿಲ್ಲದೆ ಹೊರಗಿನ ವಿವರಗಳನ್ನು ಅರಿಯುವುದು, ಮಾತನಾಡದೆ ಸನ್ನೆಮಾಡದೆ ಮನಸ್ಸಿನ ಇಂಗಿತಗಳನ್ನು ನೇರವಾಗಿ ಇನ್ನೊಬ್ಬನ ಮನಸ್ಸಿಗೆ ಮುಟ್ಟಿಸುವುದು, ಮುಂದೆ ನಿಯತವಾಗಿ ನಡೆಯತಕ್ಕುದನ್ನು ಈಗಲೇ ತಿಳಿದುಕೊಳ್ಳುವುದು, ಜಡಪದಾರ್ಥಗಳಿಗೆ ಮೈಸೋಕಿಸದೆ ಕೇವಲ ಸಂಕಲ್ಪಬಲದಿಂದಲೇ ಅವನ್ನು ಕದಲಿಸುವುದು, ಹುಟ್ಟುವ ಮುಂಚೆ ಜರುಗಿದ ಸಂಗತಿಗಳನ್ನು ನೆನಪಿಗೆ ತಂದುಕೊಳ್ಳುವುದು ಇವೆಲ್ಲವೂ ಈ ಅನುಸಂಧಾನದ ವ್ಯಾಪ್ತಿಯಲ್ಲಿ ಬಂದುವು. ಇವೇನು ಹೊಸ ಸಂಗತಿಗಳಲ್ಲ. 'ಮನುಷ್ಯಜೀವನ ಮೊದಲಾದಾಗಿನಿಂದ ಅವು ಇದ್ದೇ ಇವೆ; ಎಲ್ಲ ದೇಶಗಳಲ್ಲಿಯೂ ಎಲ್ಲ

ಕಾಲಗಳಲ್ಲಿಯೂ ಇಂಥ ವಿಶ್ವಾಸ ಜನರಲ್ಲಿ ಇದ್ದೇ ಇದೆ. ಸಾಮಾನ್ಯವಾಗಿ ಧಾರ್ಮಿಕ ಜೀವನದಲ್ಲಿ ಈ ಸಂಬಿಧಗಳು ನಿರವಾಗುವುವು. ಆದುದರಿಂದ ತತ್ತ್ವಚಿಂತಕರೂ, ಧರ್ಮ ಪ್ರಚಾರಕರೂ, ಜಿಜ್ಞಾಸುಗಳೂ ಈ ವಿವರಗಳ ವಿಚಾರವಾಗಿ ತಮ್ಮ ದೃಷ್ಟಿ ಹರಿಸುತ್ತಿದ್ದರು.

ಆದರೆ ಈ ವಿಚಾರದಲ್ಲಿ ಅವರು ಅನುಸರಿಸುತ್ತಿದ್ದ ಸಂವಿಧಾನ ಅಷ್ಟು ಸಮರ್ಪಕವಾಗಿರುತ್ತಿರಲಿಲ್ಲ. ಯುಕ್ತಿಯುಕ್ತವಾಗಿ ಪ್ರಸಂಗಗಳನ್ನು ವಿಶ್ಲೇಷಣೆ ಮಾಡುತ್ತಿದ್ದರು, ನಿಜ. ಆದರೆ ಪ್ರಸಂಗಗಳನ್ನು ನಿರ್ದಿಷ್ಟವಾಗಿ ನಿರ್ಣಯವಾಗಿ ನಿರೂಪಿಸುವ ವಿಧಾನ ಮಾತ್ರ ವ್ಯವಸ್ಥಿತವಾಗಿರಲಿಲ್ಲ. ಅಲ್ಲಲ್ಲಿ ಅವರಿವರು ಹೇಳಿದುದನ್ನೆಲ್ಲ ಕೇಳಿ, ಅದರಲ್ಲಿ ದಿಟವೆಷ್ಟೋ ಸಟೆಯೆಷ್ಟೋ ವಿಚಾರಮಾಡದೆ, ಕಿಂವದಂತಿಗಳನ್ನೂ ಕಥೆಗಳನ್ನೂ ಯಥಾ ರ್ಥಾನುಭವಗಳ ಗುಂಪಿನಲ್ಲೇ ಸೇರಿಸಿ, ಎಲ್ಲ ವಿವರಗಳನ್ನೂ ಒಂದೇ ರೀತಿನಾಗಿ ಪರಿಗ್ರಹಿಸುವ ಮನೋವೃತ್ತಿ ಹಲವರಲ್ಲಿದ್ದಿತು. ಸತ್ಯಾಸತ್ಯ ವಿವೇಚನೆಯನ್ನು ಮಾಡುವ ತವಕವಾಗಲೀ, ಸಾಮರ್ಥ್ಯವಾಗಲೀ ಅವರಿಗಿರಲಿಲ್ಲ.

ಲಂಡನ್ನಿನ 'ಅಭೌತಿಕ ಸಂಶೋಧನ' ಸಮಾಜದ ಅಧ್ವ ರ್ಯುಗಳು ಈ ದೋಷವನ್ನು ತೊಡೆಯಲು ನಿಶ್ಚಯಿಸಿ, ವಿಜ್ಞಾನಕ್ಷೇತ್ರದಲ್ಲಿ ಸನ್ಮಾನ್ಯವೆನಿಸಿದ್ದ ಸಂವಿಧಾನಗಳನ್ನೇ ಇಲ್ಲಿ ಅಳವಡಿಸಿಕೊಳ್ಳಲು ಯತ್ನಿಸಿದರು. ಈ ಸಮಾಜ ಆರಂಭವಾಗಲು ಎಂಟು ವರ್ಷಗಳ ಮೊದಲೇ ವಿಲಿಯಂ ಬ್ಯಾರೆಟ್ (ಭೌತ ವಿಜ್ಞಾನಿ) ಗ್ಲಾಸ್ಗೋವಿನ 'ವಿಜ್ಞಾನಾಭಿವರ್ಧನ ಸಂಘ'ದಲ್ಲಿ ಮಾಡಿದ ಉಪನ್ಯಾಸವೊಂದರಲ್ಲಿ ವೈಜ್ಞಾನಿಕ ಸಂವಿಧಾನಗಳ ಆಗತ್ಯವನ್ನೂ ಉಪಯುಕ್ತತೆಯನ್ನೂ ಔಚಿತ್ಯವನ್ನೂ ಒತ್ತಿ

ಹೇಳಿದನು. ಚಾರ್ಲ್ಸ್ ರಿಷೇ ಎನ್ನುವ ಇನ್ನೊಬ್ಬ ವಿಜ್ಞಾನಿ 1884 ರಲ್ಲಿಯೇ ಈ ಕ್ಷೇತ್ರದಲ್ಲಿ ಬಳಸಬೇಕಾದ ಸಂಖ್ಯಾಶಾಸ್ತ್ರವನ್ನು ಸೂಚಿಸಿದನು. ಅನುಸಂಧಾನ ಫಲಕಾರಿಯಾಗಿ ಮುಂದರಿಯಲು, ಈ ಶಾಸ್ತ್ರ ಸರಿಯಾದ ದಾರಿಯಲ್ಲಿ ಸಾಗಲು, ಇಲ್ಲಿ ವಂಚಕರ ಮತ್ತು ಭ್ರಾಂತರ ಪ್ರಭಾವವನ್ನು ಕುಗ್ಗಿಸಲು, ಮತ್ತು ವಿಷಯಕ್ಕೆ ವೈಜ್ಞಾನಿಕ ಪ್ರಶಸ್ತಿಯನ್ನು ಪಡೆದುಕೊಡಲು ಯತ್ನವು ಆರಂಭದಸೆಯಲ್ಲಿಯೇ ನಡೆಯಿತು.

## ವಿಜ್ಞಾನದ ದಾರಿಯಲ್ಲಿ

ಇಂಗ್ಲೆಂಡಿನ ಕೇಂಬ್ರಿಜ್ ಮತ್ತು ಲಂಡನ್‌ಗಳಲ್ಲಿ ಮೈದಳೆದ ಸಂಸ್ಥೆಗಳು ಸಂಭಾವಿತರಾದ, ಸುಪ್ರತಿಷ್ಠಿತರಾದ ವ್ಯಕ್ತಿಗಳನ್ನೊಳಗೊಂಡಿದ್ದು ಕೆಲವೇ ತಿಂಗಳುಗಳಲ್ಲಿ ದೃಢವಾಗಿ ಬೇರೂರಿದುವು; ವಿದ್ಯಾವಂತರ, ವಿಜ್ಞಾನಿಗಳ, ಪರಿಣತರ ಆಸಕ್ತಿಯನ್ನು ಸೆಳೆದುವು. ಇವುಗಳಿಂದ ಸ್ಫೂರ್ತಿ ಪಡೆದ ವಿದೇಶೀಯರಲ್ಲಿ ಅಮೆರಿಕದ ಸುವಿಖ್ಯಾತ ದಾರ್ಶನಿಕ ವಿಲಿಯಂ ಜೇಮ್ಸ್ ಒಬ್ಬ. ತತ್ತ್ವಶಾಸ್ತ್ರದಲ್ಲಿ ಮಾತ್ರವಲ್ಲದೆ ಮನಃಶಾಸ್ತ್ರದಲ್ಲಿಯೂ ಅತ ನಿಃಸೀಮ. ಅಮೆರಿಕ ಖಂಡದಲ್ಲಿ ಈ ವಿಚಾರವಾಗಿ ಆಸಕ್ತಿ ಬೆಳೆಯಲು ಇವನೇ ಕಾರಣ. 1884 ರಲ್ಲಿ 'ಅಮೆರಿಕ ಅಭೌತಿಕ ಸಂಶೋಧನ ಸಂಸ್ಥೆ'ಯೊಂದು ನ್ಯೂಯಾರ್ಕ್ ನಗರದಲ್ಲಿ ಸ್ಥಾಪಿತವಾಯಿತು. 1882 ರಿಂದಲೂ ಲಂಡನ್ ಸಂಸ್ಥೆಯ ಮುಖ ಪತ್ರಿಕೆಯೂ, 1907 ರಿಂದ ಅಮೆರಿಕನ್ ಸಂಸ್ಥೆಯ ಮುಖ ಪತ್ರಿಕೆಯೂ ಪ್ರಕಟವಾಗತೊಡಗಿ ಪ್ರಪಂಚದಲ್ಲೆಲ್ಲ ಈ ವಿಷಯದ ಬಗ್ಗೆ ಆಸಕ್ತಿಯನ್ನು ಹರಡಿದುವು.

ಅಮೆರಿಕದ ಅಭೌತಿಕ ಸಂಶೋಧನ ಸಂಸ್ಥೆಯು ಆರಂಭವಾದ ಏಳು ವರ್ಷಗಳ ತರುವಾಯ ಸ್ಟ್ಯಾನ್‌ಫರ್ಡ್ ವಿಶ್ವವಿದ್ಯಾನಿಲಯ ದಲ್ಲಿ ಮತ್ತು ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ಈ ವಿಚಾರ ವಾಗಿ ಪ್ರಯೋಗಾತ್ಮಕ ಅಧ್ಯಯನ ನಡೆಸಲು ಸೌಕರ್ಯಗಳನ್ನು ಕಲ್ಪಿಸಿದರು. ಅಮೆರಿಕ ಖಂಡದಲ್ಲಿ ಈ ಶಾಸ್ತ್ರ ಬೇರೂರಲು ಇವೆರಡೂ ವಿಶ್ವವಿದ್ಯಾನಿಲಯಗಳಲ್ಲಿ ನಡೆದ ಕೆಲಸ ನೆರವಾಯಿತು. ಇದಾದ ಹತ್ತು ವರ್ಷಗಳ ನಂತರ ಕೋಪನ್ ಹೇಗನ್‌ಲ್ಲಿ ಅಭೌತಿಕ ಸಂಶೋಧಕರ ಮಹಾ ಸಮ್ಮೇಳನವೊಂದು ನೆರೆಯಿತು. ಮುಂದೆ ಜಗತ್ತಿನ ಹಲವಾರು ದೇಶಗಳಲ್ಲಿ ವಿಶ್ವವಿದ್ಯಾನಿಲಯ ಮಟ್ಟದ ಅನುಸಂಧಾನ ಕೇಂದ್ರಗಳೂ ಅಧ್ಯಯನ ಪೀಠಗಳೂ ಏರ್ಪಟ್ಟವು.

ಇವುಗಳಲ್ಲಿ ಪ್ರಮುಖವಾದುದು ಅಮೆರಿಕದ ಡ್ಯೂಕ್ ವಿಶ್ವವಿದ್ಯಾನಿಲಯದ ಪ್ರಯೋಗ ಶಾಲೆ. ವಿಲಿಯಂ ಮೆಕ್ ಡೂಗಲ್ ಮತ್ತು ಜೆ. ಬಿ. ರೈನ್ ಎಂಬಿಬ್ಬರು ಸುಪ್ರಸಿದ್ಧ ಮನಃಶಾಸ್ತ್ರವೇತ್ತರ ನೇತೃತ್ವದಲ್ಲಿ 1927 ರಂದು ಈ ಪ್ರಯೋಗಶಾಲೆ ರೂಪುತಳೆದು, ಅದ್ಭುತವಾದ ಸಂಶೋಧನೆ ನಡೆಸಿ ಈ ಅಧ್ಯಯನಕ್ಕೆ ಶಾಸ್ತ್ರ ಮರ್ಯಾದೆಯನ್ನು ಒದಗಿಸಿ ಕೊಟ್ಟಿತು. ಇಲ್ಲಿ ಹಲವಾರು ಸಂವಿಧಾನಗಳನ್ನು ದೃಢ ಪಡಿಸಿದರು ; ಸಾವಿರಾರು ಅತಿಭೌತಿಕ ಸಂಗತಿಗಳನ್ನು ಸಂಗ್ರಹಿಸಿ, ಅಧ್ಯಯನ ಮಾಡಿ, ವಿವರಗಳನ್ನು ಕ್ರೋಡೀಕರಿಸಿ ವಿಷಯವನ್ನು ಸ್ಪಷ್ಟಪಡಿಸಿದರು. 1937 ರಿಂದ ಈ ಪ್ರಯೋಗ ಶಾಲೆಯ ಮುಖ ಪತ್ರಿಕೆಯೂ ಪ್ರಕಟವಾಗುತ್ತಿದೆ.

ಇದೇ ಅಧ್ಯಯನಕ್ಕೆ ಮೀಸಲಾದ ಇನ್ನೊಂದು ಅಮೆರಿಕನ್ ಸಂಸ್ಥೆಯೆಂದರೆ ನ್ಯೂಯಾರ್ಕಿನ 'ಪರಾಮಾನಸ ಪ್ರತಿಷ್ಠಾನ'

(Parapsychology Foundation). ಹೀಗೆ ತಜ್ಞರಿಂದ, ಅಭಿಜ್ಞರಿಂದ ನಡೆದ ಅನುಸಂಧಾನಗಳ, ಸಂಶೋಧನೆಗಳ ಫಲವಾಗಿ ವಿಜ್ಞಾನ ಕ್ಷೇತ್ರದಲ್ಲಿ ಅತಿಭೌತಿಕ ವಿದ್ಯೆಗೆ ತಕ್ಕಮಟ್ಟಿಗೆ ಪುರಸ್ಕಾರ ದೊರೆಯಿತು; ವಾಲ್ಟರ್ ಪ್ರಿನ್ಸ್, ಆಲಿವರ್ ಲಾಜ್, ಆಸ್ಕರ್ ಫಿಷರ್, ಕ್ರುಕ್ಸ್, ಓಸ್ಟ್‌ವಾಲ್ಡ್, ಟಿರ್ರೆಲ್ ಮೊದಲಾದ ಗಣ್ಯ ವಿಜ್ಞಾನಿಗಳೂ ಈ ಕಡೆಗೆ ತಮ್ಮ ಗಮನವನ್ನು ಹರಿಸುವಂತಾಯಿತು. ಅವರೂ ಅಧ್ಯಯನದಲ್ಲಿ ನೆರವಾದರು, ಕೆಲವರಂತೂ ಇದನ್ನೇ ತಮ್ಮ ಅನುಸಂಧಾನ ಕ್ಷೇತ್ರವನ್ನಾಗಿಸಿಕೊಂಡರು.

ಹೊಸ ಹೊಸ ಸಂವಿಧಾನಗಳು ಮೈದಳೆದು ನೂರಾರು ಸ್ವಾರಸ್ಯಕರವಾದ ವಿವರಗಳು ಸ್ಪಷ್ಟವಾದುವು. ಮಾನಸ ಶಾಸ್ತ್ರದಲ್ಲಿ ನವ್ಯವಾದೊಂದು ದೃಷ್ಟಿಯೇ ಮೂಡಿತು. ಮನಸ್ಸಿನ ಮೂಲಭೂತ ಪ್ರವೃತ್ತಿಗಳ ವಿಚಾರವಾಗಿ ಮತ್ತು ಮನುಷ್ಯನ ವ್ಯಕ್ತಿತ್ವವನ್ನು ಕುರಿತು ಹೊಸದೊಂದು ಬೆಳಕು ಕಂಡಿತು. ಮನಃಶಾಸ್ತ್ರದ ಅವಶ್ಯ ಅಂಗವಾಗಿ ಈ ಅನುಸಂಧಾನ ಈಗ ಇಂಗ್ಲೆಂಡ್, ಅಮೆರಿಕಗಳು ಮಾತ್ರವಲ್ಲದೆ ರಷ್ಯ, ಜರ್ಮನಿ, ನೆದರ್‌ಲೆಂಡ್ ಮತ್ತು ಜೆಕೋಸ್ಲವಾಕಿಯಾಗಳಲ್ಲಿಯೂ ವಿಶೇಷವಾದ ಅಧ್ಯಯನ ನಡೆಯುತ್ತಿದೆ.

ನಮ್ಮ ದೇಶವಲ್ಲಿ ಅತಿಲೌಕಿಕವೆನಿಸಿದ ಪ್ರಸಂಗಗಳಿಗೆ ಕೊರತೆಯಿರದು. ಆಧ್ಯಾತ್ಮಿಕ ಹಂಬಲವನ್ನು ಹಚ್ಚಿಕೊಂಡ ನಮ್ಮ ಜನ ಕಣ್ಣಿಗೆ ಕಾಣುವ ಜಗತ್ತನ್ನೇ ನಿತ್ಯವೆಂದು ನಂಬಿಕೊಂಡಿಲ್ಲ; ಇಂದ್ರಿಯಗ್ರಾಹ್ಯ ವಿವರಗಳು ನಿಜವಲ್ಲ, ಭ್ರಾಮಕ ಎನ್ನುವ ಮಟ್ಟಿಗೂ ಹೋಗಿದ್ದಾರೆ. ಯೋಗಿಗಳು, ಸಂತರು, ಸಿದ್ಧರು, ಪವಾಡ ಪುರುಷರು, ಇಂದ್ರಜಾಲ ಕುಶಲರು, ಭಕ್ತರು,

ಅನುಭಾವಿಗಳು ಎಲ್ಲರೂ ಅತೀಂದ್ರಿಯ ಸಾಮರ್ಥ್ಯವನ್ನು ಪಡೆದಿರುವ ಪ್ರತೀತಿಯಿರುತ್ತದೆ. ಇವರ ಈ ಸಾಮರ್ಥ್ಯದ ಕಥೆಗಳೂ, ಉಲ್ಲೇಖಗಳೂ ಲೆಕ್ಕವಿಲ್ಲದಷ್ಟು ಇರುತ್ತವೆ. ಅವರೆಂದೇ ಅಲ್ಲ, ನಿತ್ಯಜೀವನದಲ್ಲಿಯೇ ಒಂದೊಂದು ಹಳ್ಳಿಯಲ್ಲಿಯೂ ಇಂಥ ಅದ್ಭುತಶಕ್ತಿಯನ್ನು ಪಡೆದಿರುವ ಮಂದಿ ಇರುವುದುಂಟು. ಜನಜನಿತ ಕಥೆಗಳಲ್ಲಿ, ಕಿಂವದಂತಿಗಳಲ್ಲಿ, ಅಧಿಕೃತ ವೃತ್ತಾಂತಗಳಲ್ಲಿ, ಇಂಥ ಅನುಭವದ ಹತ್ತಾರು ಪ್ರಕಾರಗಳು ಪ್ರಕಟವಾಗುತ್ತವೆ.

ಜನ ಇವನ್ನು ವಿಶ್ವಾಸದಿಂದಲೂ ಕಾಣುತ್ತಾರೆ. ವಿಜ್ಞಾನದ ಸಂಶಯದೃಷ್ಟಿ ನಮ್ಮ ದೇಶದಲ್ಲಿ ಅಷ್ಟಾಗಿ ಹರಡಿಲ್ಲ. ಈ ಅನುಭವದ ಸಂಗತಿಗಳನ್ನೂ ಕಥೆಗಳನ್ನೂ ಸಾಮಾನ್ಯವೆಂಬಂತೆ ಸ್ವೀಕರಿಸಿಬಿಡುತ್ತಾರೆ: ಹೀಗಾಗಿ ಈ ದಿಕ್ಕಿನಲ್ಲಿ ಅನುಸಂಧಾನ ವಿಶೇಷವಾಗಿ ನಡೆಯಲು ಕಾರಣವಾಗಿಲ್ಲ. ಸಾಮಗ್ರಿಯ ಭೂಮಿ ಫಲವತ್ತಾದರೂ, ಸಂಶೋಧನೆಯ ಬೆಳೆ ಬಂದಿಲ್ಲ. ವೈಜ್ಞಾನಿಕ ಪದ್ಧತಿಗಳನ್ನು ಅನುಸರಿಸಿ ನಡೆಸಿದ ಅನ್ವೇಷಣೆ ತಕ್ಕಷ್ಟು ನಡೆದಿಲ್ಲ.

ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯದ ಮನಃಶಾಸ್ತ್ರ ವಿಭಾಗದಲ್ಲಿ ಇದರ ಅನುಸಂಧಾನ ಆರಂಭವಾಯಿತು. ಆಗ ಪ್ರಾಧ್ಯಾಪಕರಾಗಿದ್ದ ಡಾ. ಎಂ. ವಿ. ಗೋಪಾಲಸ್ವಾಮಿಯವರು ಮಹಾರಾಜಾ ಕಾಲೇಜಿನ ಮನಃಶಾಸ್ತ್ರ ಪ್ರಯೋಗ ಶಾಲೆಯಲ್ಲಿ ಸಂಶೋಧನೆಗಳನ್ನು ನಡೆಸತೊಡಗಿದರು. ಆದರೆ ಈ ಸಂಶೋಧನೆಗಳು ಪ್ರಕಟವಾಗಲಿಲ್ಲ; ಅನುಸಂಧಾನ ಮುಂದುವರಿಯಲೂ ಇಲ್ಲ. ಕಾಶೀ ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕ

ರಾಗಿದ್ದ ಡಾ. ಬಿ. ಎಲ್. ಆತ್ರೇಯ ಅವರೂ ಈ ಕ್ಷೇತ್ರದಲ್ಲಿ ತುಂಬ ಆಸಕ್ತರಾಗಿದ್ದರು. ಯೋಗಿ ಪ್ರತ್ಯಕ್ಷಕ್ಕೂ ಅತೀಂದ್ರಿಯ ದರ್ಶನಕ್ಕೂ ಇರಬಹುದಾದ ಸಂಬಂಧವನ್ನು ಸ್ಪಷ್ಟಪಡಿಸುವ ಹಂಬಲವನ್ನು ಅವರು ಇರಿಸಿಕೊಂಡಿದ್ದರು.

ಈಚೆಗೆ ರಾಜಾಸ್ಥಾನ ವಿಶ್ವವಿದ್ಯಾನಿಲಯಕ್ಕೆ ಸೇರಿದ ಪರಾಮಾನಸಶಾಸ್ತ್ರ ವಿಭಾಗವು ದೇಶದ, ವಿದೇಶಗಳ ಗಮನವನ್ನೆಲ್ಲ ಸೆಳೆಯಿತು. ಈ ವಿಭಾಗದ ಪ್ರಮುಖರಾಗಿದ್ದ ಹೇಮೇಂದ್ರ ನಾಥ ಬನರ್ಜಿ ಪುನರ್ಜನ್ಮದ ವಿಚಾರವಾಗಿ ನೂರಾರು ವಿವರಗಳನ್ನೂ ಆಧಾರಗಳನ್ನೂ ಹೊರಗೆಡಹಿದ್ದಾರೆ. ಅಂಥ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ವಾಲ್ಟೇರಿನಲ್ಲಿ ಪರಾಮಾನಸಶಾಸ್ತ್ರ ಶಾಖೆಯೊಂದು ಮೈದಳೆದಿದೆ.

## 3. ವಸ್ತುನಿರ್ದೇಶ

ಇಂಗ್ಲಿಷಿನಲ್ಲಿ ಈ ಶಾಸ್ತ್ರಕ್ಕೆ ಪ್ರಚುರವಾಗಿರುವ ಹೆಸರು Parapsychology ಎಂದು. ಈ ಪದವನ್ನು ಸಿದ್ಧಪಡಿಸಿದ ಖ್ಯಾತಿ ಬೊಯರ್‌ರಾಕ್ ಎನ್ನುವವನಿಗೆ ಸೇರಿದ್ದು; ಅದು ಪ್ರೈಪಟಿದ ವರ್ಷ 1893. ಫ್ಲೋರುನೇ ಮತ್ತು ಒಯೆಸ್ಟರ್ ರೈಕ್ ಎಂಬ ಅನ್ವೇಷಕರು ಈ ಪದವನ್ನು ಅಂಗೀಕರಿಸಿದಮೇಲೆ ಬಳಕೆಗೆ ಬಂದಿತು. ಅದಕ್ಕೆ ಸಮನಾದ ಪದವೆಂದರೆ 'ಪರಾಮಾನಸಶಾಸ್ತ್ರ' ಎನ್ನುವುದು. ಭೌತಿಕ ಮತ್ತು ದೈಹಿಕವಿವರಣೆಗಳಿಗೆ ಒಗ್ಗದ ಭವಿಷ್ಯದ್ದರ್ಶನ, ದೂರದರ್ಶನ ಮೊದಲಾದ ಪ್ರಸಂಗಗಳನ್ನು ಅನುಸಂಧಾನಮಾಡುವ ವಿಭಾಗವೆಂದು ಬೊಯರ್‌ರಾಕ್ ಸೂಚಿಸಿದುದೇ ನಿಂತಿತು. ಈ ಕ್ಷೇತ್ರವನ್ನು 'ಸ್ಪಿರಿಚ್ಯುಯಾಲಿಸಂ' ಎಂದೇ ಮೊದಲು ನಿರ್ದೇಶನ ಮಾಡುತ್ತಿದ್ದರು. ಈ ಮಾತಿನಲ್ಲಿ ಚೇತನಸಂಬಂಧವಾದ ವ್ಯಾಪಾರ ಮುಖ್ಯವಾದುದು. ಸತ್ತವರೊಂದಿಗೆ ಸಂಪರ್ಕವನ್ನೇರ್ಪಡಿಸುವ ಯೋಜನೆ ಪ್ರಾಚೀನವಾದುದು; 1848ರ ಸುಮಾರಿಗೆ ಫಾಕ್ಸ್ ಎಂಬ ಅಮೆರಿಕನ್ ಉತ್ಸಾಹಿ ಇಂಥ 'ಪ್ರಸಂಗ'ಗಳನ್ನು ಪ್ರಕಟಿಸಿದುದು 'ಸ್ಪಿರಿಚ್ಯುಯಾಲಿಸಂ' ಎನ್ನುವ ಮಾತು ಬಳಕೆಗೆ ಬರಲು ಕಾರಣವಾಯಿತು.

ಸತ್ತವರೊಂದಿಗೆ, ಎಂದರೆ ಪ್ರೇತಗಳೊಂದಿಗೆ, ಬದುಕಿರುವವರು ವ್ಯವಹಾರ ಮಾಡಲು ಹಲವಾರು ಸಂವಿಧಾನಗಳಿದ್ದುವು— ಮಾಧ್ಯಸ್ಥ (ಪಾತ್ರಿ) ಎಂಬುವನ ಮೇಲೆ ಬರುವ

ಆವೇಶ, ಲೇಖನಿ ತನ್ನಷ್ಟಕ್ಕೆ ತಾನೇ ಬರೆಯುತ್ತೊಡಗುವುದು, ಮೇಜು ಯಾರೂ ಮುಟ್ಟದೆಯೇ ತಿರುಗುವುದು, ಮೊದಲಾದುವು. ಇವನ್ನೆಲ್ಲ 'ಸ್ಪಿರಿಚುಯಾಲಿಸಂ' ಅಧ್ಯಯನ ಮಾಡುತ್ತಿದ್ದಿತು; ಪ್ರಯೋಗಗಳನ್ನೂ ನಡೆಸುತ್ತಿದ್ದಿತು. ಆದರೆ ಈ ವಿಭಾಗದ ಶಾಸ್ತ್ರಮರ್ಯಾದೆ ಬರುಬರುತ್ತ ಸಹಜವಾಗಿಯೇ ಕೆಳಮುಖವಾಗಿ, ಈ ಮಾತನ್ನು ಮೇಲೆ ಹೇಳಿದ ಭವಿಷ್ಯ ದ್ದರ್ಶನ, ದೂರದರ್ಶನ ಮೊದಲಾದ ವಿವರಗಳಿಗೆ ಬಳಸತೊಡಗಿದರು. ಆದರೆ ಈ ಮಾತಿಗಾಗಲೇ ಪ್ರೇತದ ವಾಸನೆ ಬಲವಾಗಿ ಹಿಡಿದಿದ್ದುದರಿಂದ ಬೇರೊಂದು ಪದವನ್ನು ಸಿದ್ಧಪಡಿಸಬೇಕಾದ ಅಗತ್ಯ ತಲೆದೋರಿತು. ಆಗಲೇ ಬೊಯರ್‌ರಾಕ್ 'ಪರಾಮಾನಸ ಶಾಸ್ತ್ರ' ಎಂಬುದನ್ನು ಸಿದ್ಧಪಡಿಸಿದುದು.

ಮಾನಸಶಾಸ್ತ್ರ ಸಾಮಾನ್ಯವಾದ, ನಿತ್ಯವ್ಯವಹಾರದ ಮನಸ್ಸನ್ನೂ ಮನಸ್ಸಿನಿಂದ ಉಂಟಾದ ಪ್ರತಿಕ್ರಿಯೆಗಳನ್ನೂ ಅಧ್ಯಯನಮಾಡುತ್ತದೆ. ಈ ನೆಲೆಯನ್ನು ಮೀರಿದ ವರ್ತನೆಗಳೂ, ವ್ಯಕ್ತಿಗಳೂ, ಪ್ರವೃತ್ತಿಗಳೂ ಪರಾಮಾನಸ ಶಾಸ್ತ್ರದ ವ್ಯಾಪ್ತಿಯಲ್ಲಿ ಸೇರುತ್ತವೆ. ಈ ಕ್ಷೇತ್ರಕ್ಕೆ ಇನ್ನೊಂದು ರೂಢಮೂಲವಾದ ಹೆಸರೂ ಇದೆ— 'ಅತೀಂದ್ರಿಯ ಪ್ರತ್ಯಕ್ಷ' (Extra-Sensory Perception ಅಥವಾ ಸಂಕ್ಷೇಪವಾಗಿ ESP) ಎನ್ನುವುದು. ಈ ಮಾತಿನ ವ್ಯಾಪ್ತಿ ಹೆಚ್ಚಿನದು. ಇಂದ್ರಿಯಗಳಿಂದ ಒದಗುವ ಅನುಭವ ಎಲ್ಲರಿಗೂ ಎಲ್ಲ ಕಾಲದಲ್ಲಿಯೂ ಇರುತ್ತದೆ. ಆದರೆ ಇಂದ್ರಿಯಗಳ ನೆರವಿಲ್ಲದೆ, ಅವಲಂಬನೆಯಿಲ್ಲದೆ, ಆದರೆ ಪ್ರತ್ಯಕ್ಷವಾಗಿಯೇ ಬರುವ ಅನುಭವಗಳು 'ಅತೀಂದ್ರಿಯ' ಎನಿಸಿಕೊಳ್ಳುತ್ತವೆ.

ಈ ಮಾತುಗಳು ಬಳಕೆಗೆ ಬರುವುದಕ್ಕೆ ಮೊದಲು 'ಅಭೌತಿಕ ಸಂಶೋಧನೆ' (psychical research) ಎನ್ನುವ ಮಾತು ವಿಶೇಷವಾಗಿ ವಾಡಿಕೆಯಲ್ಲಿದ್ದಿತು. ಫ್ರೆಂಚ್‌ನಲ್ಲಿ ಇದನ್ನೇ ಪಾರಮಾನಸ' ಅಥವಾ 'ಅತ್ಯಧ್ಯಾತ್ಮ' (metapsychique) ಎಂದು ಕರೆಯುತ್ತಿದ್ದರು. ಸಾಮಾನ್ಯವಾದ ಮಾನಸಿಕ ನಿಲುವನ್ನು ಮೀರಿ, ತೀರ ಅಧ್ಯಾತ್ಮದ ನೆಲೆಯನ್ನು ಮುಟ್ಟದೆ ಇರುವ ವ್ಯವಹಾರಗಳೆಲ್ಲ ಈ ವ್ಯಾಪ್ತಿಯಲ್ಲಿ ಅಡಗಿದ್ದುವು. ಮಾತು ಯಾವುದೇ ಆಗಿದ್ದರೂ ಈ ಶಾಸ್ತ್ರದ ಚೌಕಟ್ಟೇನೋ ಸ್ಪಷ್ಟವಾಯಿತು. ಮನುಷ್ಯಸಾಧ್ಯವಾದಷ್ಟೇ ಪ್ರಸಂಗಗಳನ್ನು ಆಯ್ದುಕೊಂಡು, ಅವುಗಳ ಕಾರಣ-ಕಾರ್ಯಸಂಬಂಧವನ್ನು, ಮೂಲ ಪ್ರವೃತ್ತಿ-ಅಭಿವ್ಯಕ್ತಿಗಳನ್ನೂ ಅಧ್ಯಯನಮಾಡುವ ಮನಃಶಾಸ್ತ್ರದ ನಿಲುವೇ ಇಲ್ಲಿ ಕೂಡ ಒದಗಿಬಂದಿತು. ಈ ಶಾಸ್ತ್ರವೂ ಮನುಷ್ಯನ ಆಂತರಿಕ ವ್ಯಾಪಾರಗಳಿಗೂ ಬಹಿರಂಗ ವ್ಯವಹಾರಗಳಿಗೂ ಇರುವ ನಂಟನ್ನು ಕುರಿತು ಅನುಸಂಧಾನ ಮಾಡುತ್ತದೆ.

ಸಾಮಾನ್ಯವಾಗಿ ಎಲ್ಲ ಜನರಿಗೂ ಸಾಧ್ಯವಲ್ಲದುದು, ಕೆಲವೇ ವ್ಯಕ್ತಿಗಳಿಗಾಗಲೀ ಕೆಲವೇ ಸಂದರ್ಭಗಳಲ್ಲಿಯಾಗಲೀ ಇದು ತೋರಿಕೊಳ್ಳುವಂಥದು ಎಂಬಷ್ಟೇ ಕಾರಣದಿಂದ ಇದರಲ್ಲಿ ಶಾಸ್ತ್ರೀಯ ಅನುಸಂಧಾನ ಸಲ್ಲದು ಎನ್ನುವಹಾಗಿಲ್ಲ. ಮನುಷ್ಯನ ಅನುಭವವಂತೂ ಆದಮೇಲೆ ಅದನ್ನು ಅಧ್ಯಯನಮಾಡುವುದರಲ್ಲಿ ಅಡ್ಡಿಯೇನು ? ಪ್ರತ್ಯಕ್ಷಾನುಭವ, ಸ್ಮೃತಿ, ಸಂವೇದನೆ, ಪರಿಕಲ್ಪನೆ ಮೊದಲಾದ ವಿವರಗಳೆಲ್ಲ ಇಲ್ಲಿಯೂ ಸಿದ್ಧವಾಗುತ್ತವೆ. ಈ ಕಾರಣದಿಂದ ಇದನ್ನು ಮನಃಶಾಸ್ತ್ರದ ಒಂದು ವಿಭಾಗವೆಂದೇ ಬಗೆದಿದ್ದಾರೆ. ಸಾಮಾನ್ಯವಾದ

ಮಾನಸವ್ಯಾಪಾರದಿಂದ ಭಿನ್ನವಾದುದು, ವಿಶಿಷ್ಟವಾದುದು, ಆ ನೆಲೆಯನ್ನು ವಿಚಾರಿಸುವುದು ಎಂಬರ್ಥದಲ್ಲಿ ಇದು 'ಪರಾಮಾನಸ' ಶಾಸ್ತ್ರ. ಸಾರ್ವಜನೀನವಾದ ಅನುಭವಗಳಲ್ಲವೆ, ಕೆಲವು ವ್ಯಕ್ತಿಸಿದ್ಧವಾದ ಕೆಲವು ಸಂದರ್ಭಸಹಜವಾದ ಅನುಭವಗಳೇ ಈ ಶಾಸ್ತ್ರದ ಮುಖ್ಯವಸ್ತು.

ಇಂದ್ರಿಯ ಮತ್ತು ವಿಷಯ ಇವುಗಳ ಸಂಯೋಗದಿಂದ ಪ್ರತ್ಯಕ್ಷಾನುಭವವಾಗುವುದು ಎಲ್ಲರಿಗೂ ತಿಳಿದ ವಿಚಾರವೇ. ಪ್ರತ್ಯಕ್ಷವನ್ನು ನಮ್ಮವರು 'ಇಂದ್ರಿಯಾರ್ಥಸಂಯೊಗ ಜನ್ಯ ಜ್ಞಾನ' ಎಂದು ನಿರ್ದೇಶಿಸಿದರು; ಅದು ಸರಿಯಾದ ತಿಳುವಳಿಕೆ (ಪ್ರಮೆ)ಯ ಮುಖ್ಯ ಪ್ರಕಾರ ಎಂದೂ ಹೇಳಿದರು. ಇಂದ್ರಿಯಗಳ ನೆರವಿಲ್ಲದೆ ಬರುವ ಜ್ಞಾನವನ್ನು ಭ್ರಮೆಯೆಂದು ಕರೆದರು. ಒಂದು ನೆಲೆಯಿಂದ ಪರಿಶೀಲಿಸಿದರೆ ಇದು ಸರಿಯೇ. ಕಣ್ಣಿನಿಂದ ಕಾಣದುದನ್ನು ಕಿವಿಯಿಂದ ಕೇಳಲಾಗದುದನ್ನು, ಕೈಯಿಂದ ಮುಟ್ಟಲಾರದುದನ್ನು ಮುಂದೆಯೇ ಇದೆ ಎಂದರೆ ನಂಬುವುದು ಹೇಗೆ? ಮನೋವಿಕಾರವುಳ್ಳವರು, ಉನ್ಮತ್ತರು ಭ್ರಾಂತರು ಇಂಥ ಅನುಭವಗಳನ್ನು ಪಡೆದು, ಅವನ್ನು ವಾಸ್ತವವೆಂದು ನಂಬಿದಾಗ ಅವರು ಚಿಕಿತ್ಸೆ ಪಡೆಯ ಬೇಕಾಗುತ್ತದೆ. ಆದರೆ ಎಲ್ಲ ಅನುಭವಕ್ಕೂ ಇಂದ್ರಿಯಗಳ ಸಹಕಾರ ಇದ್ದೇ ಇರಬೇಕೇ ಎನ್ನುವುದು ಸಂದಿಗ್ಧವಾದ ಸಮಸ್ಯೆ.

ಇಂದ್ರಿಯವ್ಯಾಪಾರವಿಲ್ಲದೆ, ವಿಷಯವಾಗಬಹುದಾದ ವಸ್ತು ದೂರದಲ್ಲಿದ್ದು, ಇಂದ್ರಿಯಾರ್ಥಸಂಯೋಗ ಅಸಾಧ್ಯವೆನಿಸಿ ದಾಗಲೂ ಅನುಭವ ಕೆಲವರಿಗೆ ಒದಗುತ್ತದೆ. ಇವಕ್ಕೆ ನಿದರ್ಶನಗಳು ನೂರಾರು ಸಿಗುತ್ತವೆ. ಒಬ್ಬಾಕೆ ಮನೆಯಲ್ಲಿಯೇ,

ಕುಳಿತುಕೊಂಡು ಹಲವಾರು ಮೈಲಿ ದೂರದಲ್ಲಿರುತ್ತಿದ್ದ ತನ್ನ ತಂಗಿ ತೀರಿಕೊಂಡುದನ್ನು, ಆಕೆ ತೀರಿಕೊಂಡ ಕ್ಷಣದಲ್ಲಿಯೇ ತಿಳಿದುಕೊಂಡಳು. ಇದು ಎಲ್ಲರಿಗೂ ಸಾಧ್ಯವಿಲ್ಲ, ದಿಟ. ಇಂಥ ಪ್ರಸಂಗಗಳು ನಮಗೆ ಬೇಕೆಂದಾಗ ನಡೆಯುವುದೂ ಇಲ್ಲ. ಆದರೆ ಕೆಲವರಿಗಾದರೂ ಇದು ಸಾಧ್ಯ ಎನ್ನುವುದು ಮುಖ್ಯ ವಿಚಾರ. ಹೀಗೆಯೇ ಇನ್ನೊಬ್ಬನ ಮನಸ್ಸಿನಲ್ಲಿರುವುದನ್ನು ಮಾತು-ಸನ್ನೆ ಮತ್ತಿತರ ಯಾವ ಭೌತಿಕಸಾಧನವೂ ಇಲ್ಲದೆ ನೇರವಾಗಿ ಅರಿತುಕೊಳ್ಳುವ ಜನ ನಮ್ಮ ನಡುವೆಯೇ ಇರುತ್ತಾರೆ. 'ಪರೇಂಗಿತಜ್ಞಾನ' ಯೋಗ ಸಿದ್ಧಿಗಳಲ್ಲಿ ಒಂದು ಮಾತ್ರವಲ್ಲ, ಎಲ್ಲ ಚತುರವ್ಯಕ್ತಿಗಳಲ್ಲಿಯೂ ಇರುವುದೇ. ಇಂಥ ಸಾಮರ್ಥ್ಯವು ಯಾವ ಸಾಧನೆಯೂ ಇಲ್ಲದೆ ಕೆಲವರಿಗೆ ಒಲಿದಿರುವುದು ಗಮನಾರ್ಹವಾಗುತ್ತದೆ.

ಇಂಥ ಕೌಶಲ ಅಸಾಧಾರಣವೆಂದೇನೋ ಹೇಳಬಹುದು. ಆದರೆ ಇದು ಅಸಹಜ, ಅಪ್ರಾಕೃತ ಎನ್ನಲಾದೀತೆ? ಅಥವಾ ಇಂದ್ರಜಾಲದಂತೆ, ಸಂಮೋಹನದಂತೆ ಭ್ರಾಮಕ, ಪ್ರೇರಿತ ಎನ್ನಬಹುದೆ? ಮೋಡಿಯಂತೆ ಕೃತಕ ಎನ್ನಬಹುದೆ? ಒಡನೆಯೇ ವಿವರಣೆ ಇಲ್ಲದಿರಬಹುದು, ಪೂರ್ವಾಪರ ವಿಶ್ಲೇಷಣೆ ಅಸಾಧ್ಯವಿರಬಹುದು. ಆದರೆ ಅನುಸಂಧಾನ ಮಾಡಿದರೆ ನಿಸರ್ಗಸಿದ್ಧವಾದ, ಯುಕ್ತಿಯುಕ್ತವಾದ ವಿವರಣೆ ಸಾಧ್ಯವಾದೀತು. ಈ ಕಾರಣದಿಂದ ಇದು ವಿಜ್ಞಾನದ ವ್ಯಾಪ್ತಿಗೆ ಒಳಪಡುತ್ತದೆ.

ಇದನ್ನು ಪ್ರಯೋಗಾತ್ಮಕವಾಗಿಯೂ ಮಾರ್ಪಡಿಸಲು ಯತ್ನಿಸಿದ್ದಾರೆ. ವಸ್ತುವಿಗೆ ಒಗ್ಗುವಂಥ ಪ್ರಯೋಗಗಳನ್ನೇ ಅಳವಡಿಸಲು ತಜ್ಞರ ವ್ಯವಸ್ಥೆಯಿದೆ. ಮೊದಮೊದಲು ಬರಿಯ

ವೈಯಕ್ತಿಕ ಪ್ರಸಂಗಗಳನ್ನೇ ಸಂಗ್ರಹಿಸಿ, ಒಂದೊಂದನ್ನೂ ಪ್ರತ್ಯೇಕವಾಗಿ ವಿಶ್ಲೇಷಣಮಾಡುವ ವಾಡಿಕೆಯಿದ್ದಿತು. ವ್ಯಕ್ತಿಪ್ರಮುಖವಾದ ಈ ಸಂವಿಧಾನ ಇನ್ನೂ ಬಳಕೆಯಲ್ಲಿದೆ. ಆದರೆ ಇದಕ್ಕಿಂತ ಹೆಚ್ಚಾಗಿ ಪರೀಕ್ಷಾಸಂವಿಧಾನವೆಂಬುದು ಈಚೆಗೆ ಫಲಕಾರಿಯಾಗುತ್ತಿದೆ. ಯಾರಿಗಾದರೂ ಅಸಾಧಾರಣವಾದ ಅಲೌಕಿಕ ಸಾಮರ್ಥ್ಯವಿದ್ದರೆ, ಅದು ಆ ವ್ಯಕ್ತಿಯ ವರ್ತನೆಯಲ್ಲಿ ಸ್ಪಷ್ಟವಾಗುತ್ತದೆ ಎಂಬುದು ಮೂಲಸೂತ್ರ. ಇದನ್ನವಲಂಬಿಸಿ ಪ್ರಾಸ್ತಾವಿಕ ಪರೀಕ್ಷೆಯಲ್ಲಿ ಇದನ್ನು ಪತ್ತೆಮಾಡುವುದು ಪರೀಕ್ಷಾ ಸಂವಿಧಾನ. ಇನ್ನಷ್ಟು ವಿವರವಾದ, ಇನ್ನೂ ಕೂಲಂಕಷವಾದ, ಸೂಕ್ಷ್ಮವಾದ ಅನುಸಂಧಾನಕ್ಕೆ ಇದು ನಾಂದಿಯಾಗುತ್ತದೆ.

ವ್ಯಕ್ತಿಯ ಈ ಅದ್ಭುತ, ವಿಚಿತ್ರ ಶಕ್ತಿಯ ಇತಿಮಿತಿಗಳನ್ನೂ ರೂಪರೇಷೆಗಳನ್ನೂ ತಿಳಿದುಕೊಳ್ಳುವುದು ಆಧುನಿಕ ಸಂವಿಧಾನಗಳ ಉದ್ದೇಶ. ಈ ಶಕ್ತಿಯಲ್ಲಿರಬಹುದಾದ ಸಹಕಾರಿ ಘಟಕಗಳನ್ನು ಪೃಥಕ್ಕರಿಸಿ, ಒಂದೊಂದನ್ನೂ ವಿವರವಾಗಿ ಪರಿಶೀಲಿಸಿ, ಅವುಗಳ ನಡುವೆ ಇರಬಹುದಾದ ಸಂಬಂಧಸೂತ್ರವನ್ನು ನಿರೂಪಿಸಲು ಯತ್ನಿಸುತ್ತಾರೆ. ಹೀಗೆ ಮಾಡುವುದರಿಂದ ವ್ಯಕ್ತಿಗೆ ವಿಶಿಷ್ಟವಾದ ಸಾಮರ್ಥ್ಯವನ್ನು ಸಾಮಾನ್ಯವಾದ ನಿಯಮಗಳ ನೆಲೆಯಲ್ಲಿ ಗಮನಿಸುವುದಾಗಲೀ ಅಳೆಯುವುದಾಗಲೀ ಸಾಧ್ಯವಾಗುತ್ತದೆ..

ಯಾವ ಶಾಸ್ತ್ರದಲ್ಲಿಯಾಗಲೀ ವಿವರಗಳು ಅಸಂದಿಗ್ಧವಾಗಿ, ಸ್ಫುಟವಾಗಿರಬೇಕು ; ಅವುಗಳ ಹಿನ್ನೆಲೆ ಮತ್ತು ಮುಂದಿನ ಸ್ಥಿತಿ ಮನದಟ್ಟಾಗಬೇಕು. ಪೂರ್ವಾಪರ ನಿಷ್ಠೆಯು ಮಾತ್ರವಲ್ಲದೆ, ಪ್ರಸಂಗಗಳ ತಾತ್ಪರ್ಯವೂ ತಿಳಿದುಬರಬೇಕು. ಈ ಉದ್ದೇಶ

ದಿಂದಲೇ ಪರಾಮಾನಸಶಾಸ್ತ್ರವೂ ಪ್ರಯೋಗಶೀಲವಾಗಿ ವ್ಯಾಪ್ತಿಸುತ್ತಿದೆ. ಅಲೌಕಿಕವೆನಿಸುವ ಪ್ರಸಂಗಗಳಲ್ಲಿ ಎಷ್ಟು ಪ್ರಯೋಗಸಿದ್ಧವಾಗಿ ಉಳಿಯಬಲ್ಲುವು, ಎಷ್ಟು ಅನ್ವೇಷಣೆಯ ಗಾಳಿಗೆ ತೂರಿಕೊಂಡು ಹೋಗುವ ಜೊಳ್ಳು ಎನ್ನುವುದು ಕಾಲಕ್ರಮದಲ್ಲಿ ಸ್ಫುಟವಾಗುತ್ತದೆ. ಈಗಂತೂ ಈ ವಿಭಾಗ ಇನ್ನೂ ಹಸುಳೆಯೆಂದೇ ಹೇಳಬೇಕು; ಪ್ರೌಢವೆಸೆಯನ್ನು ಇನ್ನೂ ಮುಟ್ಟಿಲ್ಲ.

ಇಂದ್ರಿಯಗಳ ಮಿತಿಯನ್ನು ಮೀರಿ ನೇರವಾಗಿ ಮಾನಸ ಪ್ರತ್ಯಕ್ಷ ಸಾಧ್ಯ; ಅತೀಂದ್ರಿಯವಾಗಿ ಪರಚಿತ್ತಸಂವೇದನೆ ಸಾಧ್ಯ; ಇಂದ್ರಿಯಗಳ ನೆರವಿಲ್ಲದೆ ಲೋಕಜ್ಞಾನ ಪಡೆಯುವುದೂ ಸಾಧ್ಯ. ಇಷ್ಟಂತೂ ಈವರೆಗೆ ಸ್ಪಷ್ಟವಾಗಿದೆ. ಜಗತ್ತಿನೆಲ್ಲ ಧರ್ಮಗಳೂ ಮನಸ್ಸಿನ ಪ್ರಾಧಾನ್ಯವನ್ನು ಮನಗಂಡಿರುವಾಗ, ವಿಜ್ಞಾನವೂ ಇದನ್ನು ಒಪ್ಪಿಕೊಳ್ಳಲು ಈ ಪ್ರಯೋಗಗಳೂ, ಅನ್ವೇಷಣೆಗಳೂ, ಸಂಶೋಧನೆಗಳೂ ದಾರಿಮಾಡಿಕೊಟ್ಟಿವೆ.

## ದೂರಾನುಭೂತಿ (ಟೆಲಿಪತಿ)

ವಿಜ್ಞಾನಗಳ ಕುಟುಂಬದಲ್ಲಿ ಅಭೌತಿಕವ್ಯಾಪಾರಗಳ ಅಧ್ಯಯನವೂ ಸೇರಿದಾಗ ಅದರ ಸಂಬಂಧವು ಜೀವವಿಜ್ಞಾನಕ್ಕೆ, ಅದರಲ್ಲಿಯೂ ಮನಃಶಾಸ್ತ್ರಕ್ಕೆ, ಹೆಚ್ಚಿನದೆಂದು ಸ್ಪಷ್ಟವಾಯಿತು. ಅಭೌತಿಕ, ಅತೀಂದ್ರಿಯ ವ್ಯಾಪಾರಗಳೆಂದರೆ ಪ್ರಕೃತಿಯ ಪ್ರವೃತ್ತಿಗಳಿಗೆ ಹೊರಗಾದುದಲ್ಲ, ಅಪವಾದದಂತಲ್ಲ; ಪ್ರಕೃತಿ ವ್ಯವಸ್ಥೆಯ ಒಂದು ಪ್ರಕಾರವೇ ಅದು ಎಂಬುದೂ

ಸ್ಪಷ್ಟವಾಯಿತು. ಪ್ರಕೃತಿ ಎಂದರೆ ಬರಿಯ ಭೌತಿಕನಿಯಮಗಳಿಗೇ ಸೀಮಿತವಾದುದೆಂಬ ದೃಷ್ಟಿ ಸರಿಯಲ್ಲ. ಪರಾಮಾನಸಶಾಸ್ತ್ರದಲ್ಲಿ ಅಧ್ಯಯನಮಾಡುವ ವ್ಯಾಪಾರಗಳು ಬಹುಮಟ್ಟಿಗೆ ಭೌತಿಕ ನಿಯಮಗಳನ್ನನುಸರಿಸಿಯೇ ದೊರಬರುತ್ತವೆಯೆನ್ನುವುದನ್ನು ಗಮನಿಸಬೇಕು. ಆದರೆ ಇಂಥ ಎಲ್ಲ ವ್ಯಾಪಾರಗಳೂ ಭೌತಿಕನಿಯಮಗಳನ್ನನುಸರಿಸಿಯೇ ಇರಬೇಕು ಎನ್ನುವುದು ತಪ್ಪು. ಈ ವ್ಯಾಪಾರಗಳು ಹಾಗಿರಲಿ. ಸಾಮಾನ್ಯವಾದ ಮಾನಸಕ್ರಿಯೆಗಳು ಮಿದುಳನ್ನು ಅವಲಂಬಿಸಿರುತ್ತವೆ, ನಿಜ. ಆದರೆ ಮಿದುಳಿನ ವ್ಯಾಪ್ತಿಯನ್ನು ಮೀರಿದ ಮಾನಸಕ್ರಿಯೆಗಳೇ ಇಲ್ಲ ಎನ್ನುವುದು ಸಲ್ಲದಷ್ಟೆ. ಅತಿಮಸ್ತಿಷ್ಕ ಮಾನಸಕ್ರಿಯೆಗಳಿರುವುದು ಸಂಶೋಧನೆಗಳಿಂದ ಸ್ಪಷ್ಟವಾಗಿದೆ.

ಅಭೌತಿಕ ಪ್ರವೃತ್ತಿಗಳಲ್ಲಿ ಸ್ಥೂಲವಾಗಿ ಎರಡು ವಿಭಾಗಗಳನ್ನು ನಿರ್ದೇಶಿಸುತ್ತಾರೆ—ಅತೀಂದ್ರಿಯ ಪ್ರತ್ಯಕ್ಷ (Extra-sensory Perception) ಮತ್ತು ಅತಿಮಾನಸಕ್ರಿಯೆ (Psycho-kinesis, ಅಥವಾ PK). ಇಂದ್ರಿಯಗಳ ಸಹಾಯವಿಲ್ಲದೆ, ನೇರವಾಗಿ, ಸ್ವತಂತ್ರವಾಗಿ ಜ್ಞಾನವನ್ನು ಪಡೆಯುವುದು, ದೂರದ ಪ್ರಸಂಗಗಳನ್ನು ಅಸಾಧಾರಣವಾದ ರೀತಿಯಿಂದ ಅರಿತುಕೊಳ್ಳುವುದು ಅತೀಂದ್ರಿಯ ಪ್ರತ್ಯಕ್ಷ ಎನಿಸಿಕೊಳ್ಳುತ್ತದೆ. ದೂರದ ವಸ್ತು ಉದ್ಬೋಧಕವಾಗಿದ್ದಾಗ, ಇಂದ್ರಿಯಗಳು ಜಾಗ್ರತವಾಗದಿದ್ದರೂ, ಕೆಲವೊಮ್ಮೆ ಅರಿವಾಗುತ್ತದೆ; ಅದಕ್ಕೆ ನಮ್ಮಿಂದ ಪ್ರತಿಕ್ರಿಯೆ ದೊರದೊಮ್ಮುತ್ತದೆ. ನಮ್ಮ ಮನಸ್ಸಿನಲ್ಲಿರುವ ಭಾವನೆ ಇನ್ನೊಬ್ಬರ ಮನಸ್ಸಿನಲ್ಲಿ ಪ್ರವೇಶಮಾಡಬೇಕೆಂದರೆ ಸಾಮಾನ್ಯವಾಗಿ ನಾವು ಮಾತನ್ನು ಬಳಸುತ್ತೇವೆ, ಅಥವಾ ಹಾವ, ಭಾವ, ಸಂಜ್ಞೆ, ಸಂಕೇತಗಳನ್ನು ಬಳಸುತ್ತೇವೆ.

ಇದು ಸಾಧಾರಣವಾದ ಭಾವನಾವಿನಿಮಯ. ಆದರೆ ಅತೀಂದ್ರಿಯ ಪ್ರತ್ಯಕ್ಷದಲ್ಲಿ ನಮ್ಮಿಂದ ಯಾವ ಬಗೆಯ ಬಾಹ್ಯ ಅಭಿವ್ಯಕ್ತಿಯೂ ಇರದೆ, ಬೇರೆಯವರ ಕಣ್ಣು, ಕಿವಿಗಳ ವ್ಯಾಪಾರವಿಲ್ಲದೆ ಅವನಿಗೆ ನಮ್ಮ ಭಾವನೆ ಸ್ಪಷ್ಟವಾದರೆ ಅದು ಸೋಜಿಗವಲ್ಲವೆ? ಪರಚಿತ್ತಸಂವೇದನೆ (mind reading) ಯೆಂದರೆ ಇದೇ.

ವಿಷಯ–ಇಂದ್ರಿಯಗಳ ಸಂಪರ್ಕವಿಲ್ಲದೆ ನಡೆಯುವ ಈ ವಿನಿಮಯವ್ಯಾಪಾರಕ್ಕೆ ದೂರಾನುಭೂತಿ (telepathy)ಎಂದೂ ಹೆಸರಿದೆ. ದೂರಾನುಭೂತಿ ಮನುಷ್ಯಸಾಧ್ಯವಾದುದೆಂದು ತುಂಬ ಹಿಂದಿನಿಂದಲೂ ವಿಶ್ವಾಸವಿದೆ. ಮನಃಶಾಸ್ತ್ರ ದಲ್ಲಿಯೂ ಇದರ ಸಂಭಾವ್ಯತೆಯನ್ನು ಅನುಮೋದಿಸಿದ್ದರು. ಆದರೆ ಇದರ ವೈಜ್ಞಾನಿಕ ಅನುಸಂಧಾನ ಆರಂಭವಾದುದು 1934ರ ಸುಮಾರಿನಲ್ಲಿ. ಡಾ. ಆಸಂ ಎಂಬ ವೈದ್ಯ ತನ್ನ ರೋಗಿಯೊಬ್ಬಳ ಚಿಕಿತ್ಸೆಯಲ್ಲಿ ತೊಡಗಿದ್ದಾಗ, ಸಂಮೋಹನ ವಿಧಾನ (hypnosis) ವನ್ನು ಬಳಸುತ್ತಿದ್ದ. ಆಕೆ ಹೀಗೆ ಸಂಮುಗ್ಧಸ್ಥಿತಿಯಲ್ಲಿದ್ದಾಗ ವೈದ್ಯನಿಗೆ ತನ್ನ ಮನಸ್ಸಿನಲ್ಲಿಯೇ ಅಡಗಿರುವ ಭಾವನೆಗಳನ್ನೆಲ್ಲ ಈಕೆ ಅರಿಯುತ್ತಿರುವಂತೆ ಭಾಸವಾಯಿತು; ಅದು ನಿಜವೆಂದೂ ಖಚಿತವಾಯಿತು. ಇದು ಸಂಮೋಹನಸ್ಥಿತಿಗೆ ಸಂಬಂಧಿಸಿದ ಸಾಮರ್ಥ್ಯ ಇರಬಹುದೆಂದು ಅವನಿಗನಿಸಿತು. ಸ್ವಾರಸ್ಯವಾದ ಈ ಪ್ರಸಂಗ ಒಡನೆಯೇ ತಜ್ಞರ ಆಸಕ್ತಿಯನ್ನು ಸೆಳೆಯಿತು.

ಕೃತಕವಾದ ನಿದ್ರಾಸ್ಥಿತಿಯು ಹೊರಗಿನ ಒತ್ತಡದಿಂದ ಹೀಗೆ ಪ್ರೇರಿತವಾದಾಗ ಇಂದ್ರಿಯಾತೀತವಾದ ಜ್ಞಾನ ಸಾಧ್ಯವಾದೀ ತೆನ್ನುವ ಕಲ್ಪನೆ ಆ ಕಾಲಕ್ಕೆ ಹೊಸದಾಗಿ ಕಂಡಿತು; ಎಲ್ಲರ

ಕುತೂಹಲವನ್ನು ಕೆರಳಿಸಿತು. ವಿಲಿಯಂ ಬ್ಯಾರೆಟ್‌ನ ಪ್ರಸ್ತಾಪ ಆಗಲೇ ಬಂದಿದೆಯಷ್ಟೆ. ಆತನು 1867ರಷ್ಟು ಹಿಂದೆಯೇ ಗ್ಲಾಸ್ಗೋದ 'ಬ್ರಿಟನ್ನಿನ ವಿಜ್ಞಾನಾಭಿವರ್ಧಿನೀ ಸಂಘ'ದ ಆಶ್ರಯದಲ್ಲಿ ತನ್ನ ಅನ್ವೇಷಣೆಗಳನ್ನು ವಿವರಿಸುತ್ತ ಇಂಥ ಒಂದು ಪ್ರಸಂಗವನ್ನು ಪ್ರಸ್ತಾಪಿಸಿದ್ದ. ಸಂಮುಗ್ಧ ಅವಸ್ಥೆಯಲ್ಲಿದ್ದ ಒಬ್ಬಾನೊಬ್ಬ ವ್ಯಕ್ತಿ ತುಂಬ ದೂರದಲ್ಲಿದ್ದ ಬರಹವನ್ನು ಓದುವ ಸಾಮರ್ಥ್ಯವನ್ನು ಇದ್ದಕ್ಕಿದ್ದಂತೆ ಪಡೆದಿದ್ದ. ಆಗಿನಿಂದಲೂ ಈ ವಿಚಾರವಾಗಿ ಆಗಲೇ ಅಂಕುರಿಸಿದ್ದ ಆಸಕ್ತಿ ಈಗ ಡಾ. ಆಸಂ ನ ಸಂಶೋಧನೆಯಿಂದ ಇನ್ನಷ್ಟು ಹೆಚ್ಚಿತು.

ಮನಃಶಾಸ್ತ್ರಜ್ಞರಲ್ಲಿ ಅಗ್ರಗಣ್ಯರೆನಿಸಿದ್ದ ವಿಲಿಯಂ ಜೇಮ್ಸ್, ವಿಲಿಯಂ ಮೆಕ್‌ಡೂಗಲ್ ಇವರೂ ಭೌತವಿಜ್ಞಾನಿಗಳಾಗಿದ್ದ ಸರ್ ವಿಲಿಯಂ ಬ್ಯಾರೆಟ್ ಮತ್ತು ಸರ್ ಆಲಿವರ್ ಲಾಜ್ ಇವರೂ ದೂರಾನುಭೂತಿಯು ಒದಗುವ ಬಗೆಯನ್ನು ಸ್ಪಷ್ಟಪಡಿಸಲೆತ್ನಿಸಿದರು. ಕೆಲವರ ಪ್ರಕಾರ, ಭೌತಿಕವ್ಯಾಪಾರವೇ ಇಲ್ಲಿಯೂ ಮುಖ್ಯವಾದುದು; ಅದನ್ನು ಅಭೌತಿಕ ಎನ್ನುವುದಾದರೆ ಸೂಕ್ಷ್ಮಭೌತಿಕವ್ಯಾಪಾರಗಳೆಂದು ಅರ್ಥಮಾಡಬೇಕು. ಮತ್ತೆ ಕೆಲವರ ಪ್ರಕಾರ, ಅಧ್ಯಾತ್ಮಪ್ರವೃತ್ತಿಯು ಇದರ ಕಾರಣ. ಇನ್ನೂ ಕೆಲವರ ಪ್ರಕಾರ, ಇಲ್ಲಿ ಬಯಲಾಗುವುದು ಮೆದುಳಿನ ವಿನೂತನವಾದೊಂದು ವ್ಯಾಪಾರ.

ವಿವರಣೆ ಏನೇ ಇರಲಿ, ದೂರಾನುಭೂತಿಪ್ರವೃತ್ತಿಯಂತೂ ಪ್ರಯೋಗಸಿದ್ಧವಾಯಿತು; ವೈಜ್ಞಾನಿಕ ಅನ್ವೇಷಣೆಗೆ ಒಗ್ಗುವ ವಿಷಯವೆಂದು ಖಚಿತವಾಯಿತು. ಇದನ್ನು ಆಳವಾಗಿ ಅಧ್ಯಯನ ಮಾಡುತ್ತಿರುವಾಗ ಇದರಲ್ಲಿಯೂ ಎರಡು ಬಗೆಗಳಿವೆಯೆಂದು ತಿಳಿದು ಬಂದಿತು. ಮೊದಲನೆಯದು ಮೇಲೆ ಹೇಳಿದ

ದೂರಾನುಭೂತಿ (telepathy). ಇಂದ್ರಿಯಗಳ ಪ್ರಚೋದನೆಯಾಗಲೀ ಸಹಕಾರವಾಗಲೀ ಇಲ್ಲದೆ ಬರಿಯ ಮಾನಸವ್ಯಾಪಾರಗಳನ್ನು ಅರಿಯುವುದು ಇದು. ಒಬ್ಬನ ಮನಸ್ಸಿಗೂ ಇನ್ನೊಬ್ಬನ ಮನಸ್ಸಿಗೂ ನೇರವಾಗಿ ಏರ್ಪಡುವ ಸಂಬಂಧ, ಸಾಕ್ಷಾತ್ ಸಂಬಂಧ, ಇಲ್ಲಿ ಮುಖ್ಯವಾದ ವಿವರ. ಇಲ್ಲಿ ವ್ಯವಹಾರ್ಯವಾದುವು ಕೇವಲ ಮಾನಸಿಕ ವಿವರಗಳು. ಇದನ್ನು ದೂರಮಾನಸಾನುಭೂತಿ ಎನ್ನಬಹುದು.

ಇನ್ನೊಂದು ಬಗೆಯ ದೂರಾನುಭೂತಿ, ದೂರಪ್ರಸಂಗಾನುಭೂತಿ (clairvoyance). ಹೊರಗಿನ, ದೂರದ ಪ್ರಸಂಗಗಳನ್ನೂ ಪದಾರ್ಥಗಳನ್ನೂ ಇಂದ್ರಿಯಗಳ ನೆರವಿಲ್ಲದೆ ಅರಿಯುವುದು ಇದು. ಇಲ್ಲಿ ಮನಸ್ಸು–ಮನಸ್ಸುಗಳ ಸಂಬಂಧ ಸೂಚಿತವಾಗುವುದಿಲ್ಲ. ದೂರದಲ್ಲಿ ಎಲ್ಲಿಯೋ ನಡೆಯುವ ಸಂಗತಿಗಳು ನಡೆದ ಹಾಗೆಯೇ ಕೆಲವರಿಗೆ ತಿಳಿದುಬರುವ ಕಥೆಗಳನ್ನು ಈಗಾಗಲೇ ಪ್ರಸ್ತಾಪಿಸಿದ್ದೇವೆ. ಇದನ್ನು ಊಹೆ ಎಂದಾಗಲೀ ಆಕಸ್ಮಿಕ ಸಂಯೋಗವೆಂದಾಗಲೀ ಕರೆಯುವಹಾಗಿಲ್ಲ. ನಿತ್ಯಜೀವನದಲ್ಲಿ, ನಮ್ಮ ಮನಸ್ಸಿನಲ್ಲಿ ಏನೋ ದುಗುಡ ಅಥವಾ ಕಳವಳ ಇದ್ದಾಗ, ಇದ್ದಕ್ಕಿದ್ದಂತೆ ಇಂಥ ದೂರಾನುಭೂತಿ ಸಿದ್ಧಿಸುವುದು ಸಾಮಾನ್ಯವಾದುದು. ನಮಗೆ ತೀರ ಹತ್ತಿರದವರು, ತುಂಬ ಬೇಕಾದವರು ಹಾಸಿಗೆಹಿಡಿದು ಸಾವನ್ನೆದುರಿಸಿ ಮಲಗಿರುವಾಗ ಅವರು ತೀರಿಕೊಂಡ ಗಳಿಗೆಯಲ್ಲಿಯೇ ದೂರದಲ್ಲಿ ಎಲ್ಲಿಯೋ ಇದ್ದ ನಮಗೆ ಅವರ ಮರಣ ತಿಳಿದು ಹೋಗುವ ಪ್ರಸಂಗಗಳಿವೆ. ಸ್ಪಷ್ಟವಾಗಿ ತಿಳಿಯದಿದ್ದರೂ ಏನೋ ಆತಂಕ ಇದ್ದಕ್ಕಿದ್ದಂತೆ ಮೇಲೆ ಬಂದಡರುವುದು ಹಲವರ ಅನುಭವದಲ್ಲಿರುತ್ತದೆ.

ಈ ರೀತಿಯ ಅನುಭವಕ್ಕೆ ಇಂಗ್ಲಿಷ್ ಹೆಸರಾದ clairvoyance ಎನ್ನುವ ಮಾತಿಗೆ "ಸ್ಪಷ್ಟದರ್ಶನ" ಎಂದರ್ಥ. ತತ್ತ್ವಸಮೀಕ್ಷೆಯಲ್ಲಿ ಇಂದ್ರಿಯಜನ್ಯವಾದ ದರ್ಶನ ಕ್ಲಿಷ್ಟವಾದುದು, ಅಸ್ಪಷ್ಟವಾದುದು ಎನ್ನುವ ವಾದವಿದೆ. ಇಂದ್ರಿಯಗಳಿಗೆ ವಿಶಿಷ್ಟವೃತ್ತಿಗಳಿರುವುದರಿಂದ, ಭೌತಿಕವಾದ ಮಿತಿಯಿರುವುದರಿಂದ, ಕಾರಣಾಂತರದ ಕ್ಷೋಭೆ ಅಥವಾ ದೋಷ ಇರುವುದರಿಂದ, ಆ ಮೂಲಕ ಉಂಟಾಗುವ ಜ್ಞಾನ ಮಲಿನವಾದುದು, ಅಸಮಗ್ರವಾದುದು, ಅಸ್ಪಷ್ಟವಾದುದು. ಯೋಗಸಾಧನೆಯಿಂದ ಇಂದ್ರಿಯಾತೀತವಾಗಿ ಒದಗುವ ಜ್ಞಾನ ಹೀಗಿರದೆ ಶುದ್ಧವಾಗಿಯೂ, ಸ್ಪಷ್ಟವಾಗಿಯೂ ಇರುತ್ತದೆ. ಸ್ವಯಂಪ್ರಕಾಶನಾದ ಆತ್ಮ ನೇರವಾಗಿ ಜ್ಞಾನವನ್ನು ಒದಗಿಸುವುದರಿಂದ ಪದಾರ್ಥದ ಎಲ್ಲ ಪ್ರಕಾರಗಳ, ಎಲ್ಲ ಭಂಗಿಗಳ, ಎಲ್ಲ ಲಕ್ಷಣಗಳ ಅರಿವು ಒಮ್ಮೆಲೇ ಆಗುತ್ತದೆ; ಇಂದ್ರಿಯಗಳು ಮಿತಿಯನ್ನಾಗಲೀ ರೀತಿಯನ್ನಾಗಲೀ ತಂದೊಡ್ಡುವುದಿಲ್ಲ. ಈ ವಾದವು ಇಂಗ್ಲಿಷ್‌ನ clairvoyance ಎನ್ನುವ ಮಾತಿಗೆ ಹಿನ್ನೆಲೆ. ಆದರೆ ಇಂದ್ರಿಯಾತೀತವಾದ ದೂರಾನುಭೂತಿ ಪ್ರಯೋಗಸಿದ್ಧವಾದುದೆಂದೂ, ಯಾವ ಯೋಗಸಾಧನೆಯೂ ಇಲ್ಲದೆ ಕೆಲವರಿಗೆ ಇದು ಕೈಗೂಡಿರುವುದೆಂದೂ ಸ್ಪಷ್ಟವಾದಾಗ ಈ ತಾತ್ತ್ವಿಕ ಅರ್ಥ ಹಿಂದೆಬಿದ್ದಿತು. ಮಾತೇನೋ ಉಳಿಯಿತು; ಆದರೆ ಅದರ ಶಾಸ್ತ್ರಮರ್ಯಾದೆ ಬದಲಾಯಿತು.

ದೂರಾನುಭೂತಿಯ ಗೋತ್ರಕ್ಕೆ ಸೇರಿದ ಇನ್ನೊಂದು ವ್ಯಾಪಾರವಿಶೇಷವೆಂದರೆ ಭವಿಷ್ಯದ್ದರ್ಶನ ( Precognition ಅಥವಾ Prescience ). ಮೇಲೆ ವಿವರಿಸಿದ ಎರಡು ಬಗೆಯ ದೂರಾನುಭೂತಿಗಳಲ್ಲಿ ಅರಿವಿಗೆ ಬರುವುದು ಪ್ರವೃತ್ತವಾದ,

ಎಂದರೆ ಸದ್ಯ ನಡೆಯುತ್ತಿರುವ ಪ್ರಸಂಗಗಳೇ. ಇಂದ್ರಿಯ ವ್ಯಾಪಾರವಿಲ್ಲವೆಂಬ ಒಂದೇ ವಿವರವನ್ನು ಬಿಟ್ಟರೆ ಅವು ವರ್ತಮಾನ ವಿಷಯಗ್ರಹಣಗಳೇ. ಆದರೆ ಭವಿಷ್ಯದ್ದರ್ಶನದಲ್ಲಿ ಮುಂದೆ ನಡೆಯುವ ಪ್ರಸಂಗಗಳು ಮೊದಲೇ ಅರಿವಿಗೆ ಬರುತ್ತವೆ. ಜ್ಯೋತಿಷ್ಕರ ಕೆಲಸಕ್ಕೂ ಇದಕ್ಕೂ ಸಂಬಂಧವಿಲ್ಲ; ಇಲ್ಲಿ ಗುಣಿತದ ಅಥವಾ ಅನುಮಾನದ ಅಗತ್ಯವಿಲ್ಲ. ಸಂಕೇತದ ಅರ್ಥ ನಿಷ್ಪತ್ತಿ ಬೇಕಾದುದಿಲ್ಲ; ಆಗಬಹುದು ಎಂಬ ಸಂಭವವಾದವಿಲ್ಲ. ಮುಂದೆ ನಡೆಯುವುದು ನಡೆಯುವ ಹಾಗೆಯೇ, ಎಲ್ಲ ವಿವರ ಗಳನ್ನೂ ಒಳಗೊಂಡು, ಕರಾರುವಾಕ್ಕಾಗಿ, ಈಗಲೇ ಕಣ್ಣ ಮುಂದೆ ಚಿತ್ರಿತವಾಗುವುದು ಇಲ್ಲಿನ ಸ್ವಾರಸ್ಯ. ಭವಿಷ್ಯದ್ದರ್ಶನ ಅರಿವು ಮಾತ್ರವಲ್ಲ, ನೋಟವೇ. ಇದು ಭಗವಂತನ ಲಕ್ಷಣಗಳಲ್ಲಿ ಒಂದೆಂದು ಕ್ರೈಸ್ತಧರ್ಮದ ನಂಬಿಕೆಯಿದ್ದಿತು. ಆದರೆ ಕೆಲವು ಮನುಷ್ಯರಿಗೂ ಇದು ಸಾಧ್ಯವೆಂಬುದು ಸಂಶೋಧನೆಗಳಿಂದ ದೃಢಪಟ್ಟಿತು.

## ಅತಿಮಾನಸಕ್ರಿಯೆ (PK)

ಅತಿಮಾನಸ ಕ್ರಿಯೆ (Psychokinesis) ಇನ್ನೊಂದು ವಿವರ. ಯಾವುದಾದರೊಂದು ಭೌತಿಕ ಕೆಲಸ ನಡೆಯಬೇಕೆಂದರೆ ಅದಕ್ಕೆ ಭೌತಿಕವಾದ ಕಾರಣ, ಭೌತಿಕವಾದ ಸಾಮಗ್ರಿಗಳು, ಭೌತಿಕವಾದ ಘಟಕಗಳ ಸಹಕಾರ ಎಲ್ಲವೂ ಇರಬೇಕಲ್ಲವೆ? ಮನಸ್ಸಿನಲ್ಲಿ ಮಾಡಿಕೊಂಡ ಮಾತ್ರಕ್ಕೆ ಮುಂದಿಗೆ ಸಿದ್ಧವಾಗು ವುದಿಲ್ಲ. ಒಂದು ವಸ್ತುವಿನಲ್ಲಿ ಕೆಲಸವನ್ನು ಕಾಣಬೇಕೆಂದರೆ ಅದಕ್ಕೆ ನಿಕಟವರ್ತಿಯಾದ ಪ್ರೇರಣೆ, ಪ್ರಚೋದನೆ ಇರಬೇಕು.

ಹೀಗಿಲ್ಲದೆ ಕೇವಲ ಮಾನಸಿಕ ಕಲ್ಪನೆಯಿಂದಲೇ ಭೌತಿಕ ಕ್ರಿಯೆಯನ್ನು ಆಗಮಾಡಿಸುವ ಸಾಮರ್ಥ್ಯ ಕೆಲವರಿಗೆ ಇರುತ್ತದೆ ಎನ್ನುವುದು ಪ್ರಯೋಗಗಳಿಂದ ತಿಳಿದುಬಂದಿದೆ. ಇದು ಮಾನಸಕ್ರಿಯೆ ಅಥವಾ ಬರಿಯ ಸಂಕಲ್ಪದಿಂದ ಒದಗಿದ ಕೆಲಸ.

ವ್ಯಕ್ತಿಯು ತನ್ನ ಆಂತರಿಕಮಾನಸ ವ್ಯಾಪಾರದಿಂದ ಬಾಹ್ಯ ಪ್ರಪಂಚದಲ್ಲಿ ಕೆಲಸಮಾಡಿಸುವುದು ಧಾರ್ಮಿಕಕ್ಷೇತ್ರದಲ್ಲಿ ಚಿರ ಪರಿಚಿತವಾದುದೇ. ಸಮರ್ಪಕವೆನಿಸಿದ ಭೌತಿಕವಿವರಣೆ ಇಲ್ಲ ದಿರುವ ಇಂಥ ಪ್ರಸಂಗಗಳು ಬೆಳಕಿಗೆ ಬಂದಾಗ ಅವು 'ದೂರ ಕ್ರಿಯಾಕಾರಿತ್ವ' (telekinesis) ಎನಿಸಿಕೊಂಡುವು. ಕೆಲಸದ ಪ್ರೇರಕಘಟಕಗಳು ಎದುರಿಗೆ ಕಾಣದಿದ್ದರೂ ದೂರದಲ್ಲಿ ಎಲ್ಲಿಯೋ ಇದ್ದುಕೊಂಡು ಪ್ರೇರಣೆಯನ್ನು ಒದಗಿಸುತ್ತವೆ ಯೆಂದೂ, ಇಲ್ಲಿ ಭೌತಿಕವಾದ ಕಾರಣ-ಕಾರ್ಯಸಂಬಂಧವೇ ಇರುವುದೆಂದೂ ನಂಬಿಕೆಯಿದ್ದಿತು. ಆದರೆ ಪ್ರಯೋಗಗಳಿಂದ ಪ್ರೇರಣೆಯು ಭೌತಿಕಸ್ವಭಾವದ್ದಾಗಿರದೆ ಮಾನಸಿಕವಾಗಿರಲೂ ಬಹುದೆಂದು ತಿಳಿದು ಬಂದಾಗ ಇದು ಕೇವಲ ಅಥವಾ ಸಾಮಾನ್ಯ ಮಾನಸವಾಗಿರದೆ ಅದನ್ನು ಮೀರಿದ ನೆಲೆಯದೆಂದೂ ಖಚಿತ ವಾಯಿತು. 'ಅತಿಮಾನಸಕ್ರಿಯೆ' ಎನ್ನುವುದರಲ್ಲಿ ಈ ತಾತ್ಪರ್ಯವಿದೆ.

ಭೌತಿಕವಾದ ಕ್ರಿಯೆಗೆ ಕಾರಣವೂ ಭೌತಿಕವಾಗಿಯೇ ಇರಬೇಕೆನ್ನುವುದು ವೈಜ್ಞಾನಿಕರಿಗೆಲ್ಲ ಪರಿಚಿತವಾದ ಪ್ರಾಚೀನ ಕಲ್ಪನೆ. ಆದರೆ ವಿಜ್ಞಾನ ಬೆಳೆದಂತೆ, ಮಾನಸ ವ್ಯಾಪಾರದ ಪ್ರಭಾವ ದೈಹಿಕಕ್ರಿಯೆಗಳ ಮೇಲೆ ಬೀಳುವುದು ಸಾಧ್ಯವೆಂದು ತಿಳಿದುಬಂದಿತು. ವೈದ್ಯಶಾಸ್ತ್ರದಲ್ಲಿ ಮಾನಸದೈಹಿಕವ್ಯಾಧಿಗಳು (Psychosomatic diseases) ಪ್ರಸಿದ್ಧಿಗೆ ಬಂದುವಷ್ಟೆ.

ನಿದರ್ಶನಕ್ಕೆ, ಮನಸ್ಸಿನಲ್ಲಿ ದುಗುಡವಿದ್ದರೆ ಉಂಡ ಆಹಾರ ಸರಿಯಾಗಿ ಜೀರ್ಣವಾಗದು. ದುಗುಡ ಅಥವಾ ಉದ್ವೇಗ ಅಥವಾ ಆಂತಕ ಎನ್ನುವುದು ಮಾನಸವ್ಯಾಪಾರ; ಪಚನಕ್ರಿಯೆ ಭೌತಿಕವಾದುದು. ದುಗುಡದಿಂದ ಪಚನಕ್ರಿಯೆ ಸ್ತಬ್ಧ ವಾಯಿತೆಂದರೆ, ಪ್ರಕ್ಷುಬ್ಧವಾಯಿತೆಂದರೆ ಅದು 'ಮಾನಸದೈಹಿಕ'. ಹೀಗೆಯೇ ಮನಸ್ಸಿನಲ್ಲಿ ಆತಂಕವೋ ಭೀತಿಯೋ ಇದ್ದರೆ ಚರ್ಮದ ವ್ಯಾಧಿಗಳೂ ಜಠರ ರೋಗಗಳೂ ತಲೆದೋರುತ್ತವೆ.

ದೈಹಿಕಕ್ರಿಯೆಗಳಂತೆಯೇ ಭೌತಿಕಕ್ರಿಯೆಗಳೂ ಇಂಥ ಪ್ರಭಾವಕ್ಕೆ ಒಳಗಾಗುವುದಾದರೆ ಅಸಂಭವವೇನಲ್ಲ. ದೇಹದಲ್ಲಿ ಮಾನಸಪ್ರಭಾವವಾದರೆ ಭೌತಿಕ ಅಥವಾ ಲೌಕಿಕ ನೆಲೆಯಲ್ಲಿ ಅತಿಮಾನಸ ಎನ್ನಬಹುದು. ಹೀಗೆ ಸಂಕಲ್ಪದಿಂದ ಜಡವಸ್ತುಗಳು ಚಲಿಸುವುದೂ, ಪ್ರಸಂಗಗಳು ಬರಿಯ ಆಲೋಚನೆ ಯಿಂದಲೇ ಜರುಗುವುದೂ ಎಲ್ಲ ದೇಶಗಳಲ್ಲಿಯೂ ಮತ್ತೆ ಮತ್ತೆ ಪ್ರಕಟವಾಗುತ್ತಿರುವ ವಿಚಾರಗಳೇ. ಸಾಮಾನ್ಯವಾಗಿ ನಮ್ಮಲ್ಲಿ 'ಭೂತಚೇಷ್ಟೆ' ಎಂದು ವ್ಯವಹರಿಸುವ ಸಂಗತಿಗಳು ನಿದರ್ಶನ. 'ದೆವ್ವ' ಹಿಡಿದ ಮನೆಯಲ್ಲಿ ಬಾಗಿಲು ತಾನಾಗಿ ತೆರೆದುಕೊಳ್ಳು ವುದು, ಸಾಮಾನುಗಳು ಯಾರೊಬ್ಬರ ನೆರವಿಲ್ಲದೆ ಓಡಾಡು ವುದು, ವ್ಯಕ್ತಿ ಕಾಣಿಸದೆ ಕಾಲುಸಪ್ಪಳ ಕೇಳಿಸುವುದು, ಕಾಣಿಸದ ವ್ಯಕ್ತಿ ಮೈಮುಟ್ಟಿದಂತೆ ಆಗುವುದು ಇವೆಲ್ಲವೂ ಈ ಗುಂಪಿನ ವ್ಯಾಪಾರದಲ್ಲಿ ಸೇರುತ್ತವೆ.

ಇಂಥ ಕಥೆಗಳನ್ನು ಎಲ್ಲರೂ ಕೇಳಿಯೇ ಇರುತ್ತಾರೆ. ಇವು ತೀರ ಸುಳ್ಳು ಎನ್ನಲು ಕಾರಣವಿಲ್ಲ; ಉತ್ಪ್ರೇಕ್ಷೆಗೇನೋ ಅವಕಾಶ ತೋರಿಸಬೇಕು, ನಿಜ. ಮನಸ್ಸಿನ ಶಕ್ತಿಯಿಂದ ಬಾಹ್ಯಪ್ರಪಂಚದ ವ್ಯವಹಾರ ನಿರ್ದಿಷ್ಟವಾಗುವುದು ಅಸಂಭಾವ್ಯ

ವೇನಲ್ಲ. ಬೇರೆ ಹಲವು ಅಜ್ಞಾತ, ಸೂಕ್ಷ್ಮಶಕ್ತಿಗಳಿಂದ ಲೌಕಿಕ ಕಾರ್ಯ ನಡೆದಿರುವುದು ಪ್ರಸಿದ್ಧವಾಗಿದೆ. ನೀರಿನಿಂದ ಯಂತ್ರ ಚಾಲನೆ ನಡೆದಿಲ್ಲವೆ? ಹಬೆಯಿಂದ ಬಂಡಿ ಓಡಾಡುವುದಿಲ್ಲವೆ? ವಿದ್ಯುಚ್ಛಕ್ತಿ ಕಣ್ಣಿಗೆ ಕಾಣದಿದ್ದರೂ ಅದರಿಂದ ಎಷ್ಟೊಂದು ಕೆಲಸಗಳು ನಡೆಯುವುದಿಲ್ಲ? ಪರಮಾಣುವಿನ ಸಾಮರ್ಥ್ಯದಿಂದ ಮಾರಕ ಶಸ್ತ್ರಾಸ್ತ್ರಗಳು ಸಿದ್ಧವಾಗಿಲ್ಲವೆ? ಅಣ್ವಸ್ತ್ರದಿಂದ ಇಡೀ ಜಗತ್ತೇ ಭಯಗೊಂಡಿದೆಯಷ್ಟೆ. ಇವೆಲ್ಲ ಮೂಲದಲ್ಲಿ ಇಂದ್ರಿಯಾತೀತವಾದುವೇ, ತೀರ ಸೂಕ್ಷ್ಮವಾದುವೇ, ಅವುಗಳ ಪ್ರಭಾವ ತುಂಬ ಸಣ್ಣ ಪ್ರಮಾಣದ್ದೇ. ಹೀಗೆಯೇ ಮಾನಸ ವ್ಯಾಪಾರಗಳಿಂದಲೂ ಲೌಕಿಕಪ್ರಸಂಗಗಳು ಪ್ರಸ್ತುತವಾದರೆ ಅದರಲ್ಲಿ ಅಸಾಧ್ಯ, ಅಸಂಭಾವ್ಯ ಎನ್ನುವುದೇನು?

## ಅತಿಮಾನಸತತ್ತ್ವ (Psi)

ಅಂತೂ ಅಭೌತಿಕಪ್ರವೃತ್ತಿಗಳ ಅನುಸಂಧಾನ ದಿನೇ ದಿನೇ ಬಲಗೊಳ್ಳುತ್ತಿದೆ. ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಇದಕ್ಕಾಗಿ ಪ್ರಯೋಗಶಾಲೆಗಳು ಏರ್ಪಟ್ಟಿದ್ದು ಸಂಶೋಧನೆ ಬಿರುಸಿನಿಂದ ನಡೆಯುತ್ತಿದೆ. ನೂರಾರು ಸ್ವಾರಸ್ಯವಾದ ವಿವರಗಳು ಬೆಳಕಿಗೆ ಬರುತ್ತಿವೆ; ಬಿಡಿಸಲಾರದ ಒಗಟುಗಳೆನಿಸಿಕೊಂಡ ಹಲವಾರು ವಿವರಗಳು ಈಗೀಗ ಸ್ಪಷ್ಟವಾಗುತ್ತಿವೆ. ಇದು ವೈಜ್ಞಾನಿಕ ಅನ್ವೇಷಣೆಯೆನ್ನುವ ವಿಚಾರವಾಗಿ ಇದ್ದ ಸಂದೇಹ ಸಾಕಷ್ಟು ಹರಿದಿದೆ.

ಈ ಪ್ರಗತಿಯ ಯಶಸ್ಸಿನ ಹಿನ್ನೆಲೆಯಲ್ಲಿ ಒಂದು ಪ್ರಾಚೀನ ಸತ್ಯ ಅಚ್ಚಳಿಯದೆ ನಿಂತಿದೆ— ಮನುಷ್ಯನ ದೇಹದಲ್ಲಿ ರೂಢ

ಮೂಲವಾಗಿ, ಸತ್ತ್ವಯುತವಾಗಿ ತುಂಬಿ ಬಂದ ಮಾನಸಶಕ್ತಿ ಅಚಿಂತ್ಯಾದ್ಭುತವಾದುದು, ಎಂಬುದು. ಅತಿಲೌಕಿಕಪ್ರಸಂಗಗಳು ಸಾಧ್ಯ ಎನ್ನುವ ನಿಲುವಿನಲ್ಲಿ ಆಧ್ಯಾತ್ಮಿಕ ಅಥವಾ ಅತಿಮಾನಸತತ್ತ್ವ (Psi) ದ ಅರ್ಥವನ್ನು ವಿಚಾರ ಮಾಡಬೇಕಾಗಿದೆ. ಇಂದ್ರಿಯಗಳ ಮಿತಿಯನ್ನು ಮೀರಿ, ನೇರವಾಗಿ ಮಾನಸ ಪ್ರತ್ಯಕ್ಷ ಸಾಧ್ಯ; ಅತೀಂದ್ರಿಯವಾಗಿ ಪರಚಿತ್ತ ಸಂವೇದನೆ ಸಾಧ್ಯ; ಇಂದ್ರಿಯಗಳ ನೆರವಿಲ್ಲದೆ ಲೋಕ ಜ್ಞಾನ ಪಡೆಯುವುದು ಸಾಧ್ಯ; ಮನಸ್ಸು ಅರ್ಥಕ್ರಿಯಾಕಾರಿಯಾಗುವುದು ಸಾಧ್ಯ—ಇಷ್ಟಂತೂ ಈಗ ಸ್ಪಷ್ಟವಾಗಿದೆ. ಇದರ ತಾತ್ಪರ್ಯವೇನು? ಮನಸ್ಸು ಮುಖ್ಯವಾದುದು, ಪ್ರಬಲವಾದುದು; ಪ್ರಭಾವಶಾಲಿಯಾದುದು ಎನ್ನುವುದು. ಪ್ರಾಪಂಚಿಕ ವ್ಯವಹಾರಗಳಲ್ಲಿಯೇ ಮನಸ್ಸು ಅನಿವಾರ್ಯವಾದುದು, ಪೂರ್ವಗಾಮಿಯಾದುದು, ಪ್ರಮುಖವಾದುದು ಎಂದು ಎಲ್ಲರೂ ಬಲ್ಲರಷ್ಟೆ. ಮೇಲೆ ಹೇಳಿದ ಅಭೌತಿಕ, ಅತಿಲೌಕಿಕವ್ಯವಹಾರಗಳಲ್ಲಿ ಅತಿಮಾನಸತತ್ತ್ವದ ಪಾತ್ರವೇನು ಎನ್ನುವುದೇ ಈಗಿನ ಮುಖ್ಯವಾದ ಸಮಸ್ಯೆ.

## ನೆರವಾಗುವ ಬರಹಗಳು


1. Proceedings of the Society for Psychical Research, London (from 1882)
2. Journal of the Society for Psychical Research, London (from 1884)
3. Journal of the American Society for Psychical Research (from 1907)
4. A. R. Osborn, *The Superphysical* (1937)
6. W. Carrington, *Matter, Mind and Meaning* (1949)
5. G. N. M. Tyrrell, *The Personality of Man* (1947)
6. J. B. Rhine, *New Frontiers of the Mind* (1950)
11. J. R. Smythies, *Science and ESP* (1967)
10. J. Langdon-Davies, *On the Nature of Man* (1960)
9. G. R. Schmeidler and R. A. Meconnell, *ESP and Personality Patterns* (1958)
8. J. B. Rhine and J. G. Pratt, *Parapsychology: Frontier Science of the Mind* (1957)
7. S. G. Soal and F. Bateman, *Modern Experiments in Telepathy* (1954)

## ಪ್ರಚಾರೋಪನ್ಯಾಸ ಮಾಲೆ

| | | |
|---|---|---|
| 1. | ನಗೆಯ ನೆಲೆ | ಎಸ್. ಕೆ. ರಾಮಚಂದ್ರರಾವ್ |
| 2. | ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| 3. | ಭಯ-ಸರಳವಿಶ್ಲೇಷಣೆ | ಎಂ. ಶಿವರಾಂ |
| 4. | ಶ್ರೀ ಕವಿ ಲಕ್ಷ್ಮೀಶ | ಜಿ. ಎಸ್. ಸಿದ್ದಲಿಂಗಯ್ಯ |
| 5. | ಶಾಂತಿನಾಥಕವಿ | ಕಮಲಾ ಹಂಪನಾ |
| 6. | ಉತ್ತಂಗಿ ಚನ್ನಪ್ಪ | ಸ. ಸ. ಮಾಳವಾಡ |
| 7. | ಬಯಲಾಟಗಳು | ಚಂದ್ರಶೇಖರ ಕಂಬಾರ |
| 8. | ನಾಟಕದಲ್ಲಿ ನವ್ಯತೆ | ಪಿ. ಲಂಕೇಶ್ |
| 9. | ದ್ರಾವಿಡ ಸಂಖ್ಯಾವಾಚಕಗಳು | ಹಂಪ. ನಾಗರಾಜಯ್ಯ |
| 10. | ಉಪಭಾಷೆ | ಕೃಷ್ಣ ಪರಮೇಶ್ವರ ಭಟ್ಟ |
| 11. | ಅರವಿಂದರ ವಿಚಾರಧಾರೆ | ಸಿ. ಕೆ. ವೆಂಕಟರಾಮಯ್ಯ |
| 12. | ಪೂರ್ಣಯೋಗಿ ಶ್ರೀ ಅರವಿಂದರು | ಕೋ. ಚನ್ನಬಸಪ್ಪ |
| 13. | ಪ್ರಾಚೀನ ಸಂಸ್ಕೃತಿ | ಎಸ್. ಕೆ. ರಾಮಚಂದ್ರರಾವ್ |
| 14. | ಪ್ರಾಚೀನ ಭಾರತದ ಆರ್ಥಿಕ ವ್ಯವಸ್ಥೆ | ಎನ್. ಜಿ. ಚಂದ್ರಶೇಖರಯ್ಯ |
| 15. | ಸಣ್ಣ ಕೈಗಾರಿಕೆಗಳು | ಆರ್. ಎಸ್. ಆರಾಧ್ಯ |
| 16. | ವಿವಾಹ ಪದ್ಧತಿಗಳು | ಎಸ್. ಕೆ. ರಾಮಚಂದ್ರರಾವ್ |
| 17. | ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| 18. | ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿಶೆಟ್ಟಿ |
| 19. | ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| 20. | ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| 21. | ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| 22. | ಕುರುಡು | ಎಸ್. ಟಿ. ಪುಟ್ಟಣ್ಣ |
| 23. | ಕಣ್ಣಿನ ರೋಗಗಳು | ಎಸ್ .ಟಿ. ಪುಟ್ಟಣ್ಣ |
| 24. | ಕ್ಷಯ | ಎಂ. ಬಸವರಾಜೆ ಅರಸು |
| 25. | ಮೂತ್ರಪಿಂಡದ ಕೆಲವು ರೋಗಗಳು | ಎಂ. ಬಸವರಾಜೆ ಅರಸು |
| 26. | ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| 27. | ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| 28. | ಅಂತರ್ಜಲ | ಸಿ. ನಾಗಣ್ಣ |
| 29. | ಪಂಪ | ತ. ಸು. ಶಾಮರಾಯ |
| 30. | ದೇಹರಚನೆ ಹಾಗೂ ಮೂಳೆಗಳು | ಎಸ್. ಬಿ. ವಸಂತ ಕುಮಾರ್ |
| 31. | ಶ್ರೀನಿವಾಸ ರಾಮಾನುಜನ್ | ಜಿ. ಟಿ. ನಾರಾಯಣರಾವ್ |
| 32. | ಮಹಾಕವಿ ಕುಮಾರನಾಶಾನ್ | ಬಿ.ಕೆ. ತಿಮ್ಮಪ್ಪ, ಟಿ.ವೆಂಕಟಲಕ್ಷ್ಮಿ |
| 33. | ತುಳ್ಳಲ್‌ಕವಿ ಕುಂಜನ್ ನಂಬಿಯಾರ್ | ಬಿ.ಕೆ. ತಿಮ್ಮಪ್ಪ, ಟಿ.ವೆಂಕಟಲಕ್ಷ್ಮಿ |